ಜನಪ್ರಿಯ ಕಲಾಮಾಲಿಕೆ

# ಚಿತ್ರಕಲೆ ಮತ್ತು ಮನೋವಿಕಾಸ



ಡಾ|| ಸಿ. ಆರ್. ಚಂದ್ರಶೇಖರ್



ಕರ್ನಾಟಕ ಲಲಿತಕಲಾ ಅಕಾಡೆಮಿ

# ಚಿತ್ರಕಲೆ ಮತ್ತು ಮನೋವಿಕಾಸ

ಡಾ॥ ಸಿ. ಆರ್. ಚಂದ್ರಶೇಖರ್




ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-560 002

**CHITRAKALE MATTU MANOVIKASA**

*by Dr. C. R. Chandrashekar*
*Published by K. Mukundan, Registrar*
*Karnataka Lalithakala Academy*
*Nrupatunga Road, Bangalore-560 002*

First Impression : 1995

**ಬೆಲೆ : ರೂ. 5-00**

ಮುಖಚಿತ್ರ : ಐದು ವರ್ಷದ ಮಗು ರಚಿಸಿದ ಚಿತ್ರ

ಸಂಪಾದಕರು : **ಚಿ. ಸು. ಕೃಷ್ಣಸೆಟ್ಟಿ**

ಮುದ್ರಣ
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ: 6618752, 6613123

## ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದುವರೆಗೆ ಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ. ಪ್ರಸ್ತುತ ಅಕಾಡೆಮಿಯು ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ಸುಲಭ ದರದಲ್ಲಿ ಜನಸಾಮಾನ್ಯರಿಗೂ ಕಲೆಯು ಅರ್ಥವಾಗಲಿ ಎಂಬ ಉದ್ದೇಶದಿಂದ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಈ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರತರುತ್ತಿದೆ.

ಈ ಮಾಲಿಕೆಯ ಪುಸ್ತಕಗಳನ್ನು ಓದುವುದರಿಂದ ಜನಸಾಮಾನ್ಯರಲ್ಲಿ ಕಲಾ ಇತಿಹಾಸವನ್ನು ಪರಿಚಯಿಸುತ್ತಾ ಕಲಾಕೃತಿಯನ್ನು ನೋಡಿ, ಗ್ರಹಿಸಿ, ರಸಸ್ವಾದನೆ ಮಾಡಿ ಗುಣ ಮೌಲ್ಯಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿ ಉತ್ತಮ ಗುಣ ಮೌಲ್ಯವುಳ್ಳ ಕಲಾಕೃತಿಯನ್ನು ಸಂಗ್ರಹಿಸುವಲ್ಲಿ ಆಸಕ್ತಿ ಮೂಡುತ್ತದೆಯೆಂಬ ಆಶಯ ನಮ್ಮದಾಗಿದೆ.

ಈ ಮಾಲಿಕೆಯಲ್ಲಿ ಪುಸ್ತಕಗಳನ್ನು ಚಿತ್ರಯಾತ್ರೆಯ ಸಂದರ್ಭದಲ್ಲಿ ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಚಿತ್ರಯಾತ್ರೆಯು ನಾಡಿನಾದ್ಯಂತ ಸಂಚರಿಸುವಾಗ ಎಲ್ಲಾ ಪುಸ್ತಕಗಳು ನಾಡಿನ ಮೂಲೆ ಮೂಲೆಗೂ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಈ ಮಾಲಿಕೆಯಲ್ಲಿ ಬರೆದಿರುವ ಲೇಖಕರೆಲ್ಲರೂ ಸಂಬಂಧಪಟ್ಟ ವಿಷಯದಲ್ಲಿ ಪರಿಣತರೇ ಆಗಿದ್ದಾರೆ. ನಮಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಈ ಕಿರುಹೊತ್ತಿಗೆಗಳನ್ನು ಬರೆದುಕೊಟ್ಟ ಕಲಾ ಲೇಖಕರಿಗೆ ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಕಲಾವಿದರೂ, ಕಲಾಸಕ್ತರೂ ತುಂಬು ಹೃದಯದಿಂದ ಸ್ವಾಗತಿಸಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇವೆ.

**ಸಿ. ಚಂದ್ರಶೇಖರ**
ಅಧ್ಯಕ್ಷರು

# ಚಿತ್ರಕಲೆ ಮತ್ತು ಮನೋವಿಕಾಸ

## ಮನಸ್ಸು ಎಂದರೇನು?

ಪಂಚೇಂದ್ರಿಯಗಳಿಗೆ ಗೊತ್ತಾಗುವ ದೇಹ ಏನೆಂಬುದು ಎಲ್ಲರಿಗೂ ಗೊತ್ತು. ತಲೆ, ಕತ್ತು, ಎದೆ, ಹೊಟ್ಟೆ, ಕೈಕಾಲುಗಳಲ್ಲದೆ, ದೇಹದೊಳಗಿರುವ ಅನ್ನನಾಳ, ಜಠರ, ಕರುಳು, ಹೃದಯ, ಶ್ವಾಸಕೋಶ, ಯಕೃತ್ತು, ಮೂತ್ರಪಿಂಡ, ಗರ್ಭಕೋಶ, ವೃಷಣಗಳು ನಮ್ಮ ದೇಹದ ವಿವಿಧ ಅಂಗಾಂಗಗಳು. ಆದರೆ ಈ ದೇಹವನ್ನು ನಿಯಂತ್ರಿಸಿ, ನಿರ್ದೇಶಿಸುವ 'ಮನಸ್ಸು' ಏನು? ಚಟುವಟಿಕೆಗಳಿಗೆ ಹಚ್ಚುವ ಚೇತನವೇ ಮನಸ್ಸು. ವ್ಯಕ್ತಿಗೇ ವಿಶಿಷ್ಟವಾದ ವ್ಯಕ್ತಿತ್ವವೇ 'ಮನಸ್ಸು'.ಈ ಮನಸ್ಸಿನ ಚಟುವಟಿಕೆಗಳು ಹಲವಾರು.

ಹತ್ತಾರು ಕ್ರಿಯೆಗಳನ್ನು ಸಮರ್ಪಕವಾಗಿ, ಸುಲಲಿತವಾಗಿ ನಿರ್ವಹಿಸುವ ಮನಸ್ಸು ಒಂದು ಅದ್ಭುತ. ಮನಸ್ಸಿನ ಆಳ ವಿಸ್ತಾರಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವೇ. ಇಂತಹ ಮನಸ್ಸು ಹುಟ್ಟಿದಾಗಲೇ ಇರುವುದಿಲ್ಲ. ಬದುಕಿನ ಮೊದಲ ಇಪ್ಪತ್ತು ವರ್ಷಗಳಲ್ಲಿ ಹಂತ ಹಂತವಾಗಿ ಮನಸ್ಸು ವಿಕಸನಗೊಳ್ಳುತ್ತದೆ. ಅದು ಹೇಗೆ ಎಂದು ನೋಡೋಣ. ಪ್ರಸಿದ್ಧ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್ ಆಧುನಿಕ ಮನಃಶಾಸ್ತ್ರದ ಪಿತಾಮಹ ಎಂದು ಗೌರವಿಸಲ್ಪಟ್ಟಿದ್ದಾನೆ. ತನ್ನಲ್ಲಿಗೆ ಚಿಕಿತ್ಸೆಗಾಗಿ ಬಂದ ನೂರಾರು ನರರೋಗಿಗಳ ನಡೆನುಡಿ, ಅನುಭವಗಳನ್ನು ಆಳವಾಗಿ ವಿಶ್ಲೇಷಿಸಿ 'ಮನೋವಿಶ್ಲೇಷಣಾ ಸಿದ್ಧಾಂತ'ವನ್ನು ಆತ ಮಂಡಿಸಿದ್ದಾನೆ. ಆತನ ಪ್ರಕಾರ ಮನಸ್ಸು ಮೂರು ಭಾಗಗಳಾಗಿ ವಿಕಸನಗೊಳ್ಳುತ್ತದೆ.

**1. ಇದ್ :** ಈ ಭಾಗ ಹುಟ್ಟಿದಾಗಲೇ ಇರುವಂಥದ್ದು. ಅದರ ಮೂಲ ಬಲ 'ಆಸೆ (LIBIDO) ಆಹಾರವನ್ನು ಸೇವಿಸಿ ಹಸಿವನ್ನು ತಣಿಸುವುದು. ನೀರು ಕುಡಿದು ದಾಹವನ್ನು ಹೋಗಲಾಡಿಸುವುದು. ಅಹಿತವನ್ನುಂಟುಮಾಡುವ ಯಾವುದೇ ಪ್ರಚೋದನೆ-ವಸ್ತುವನ್ನು ನಿವಾರಿಸಿಕೊಂಡು, ಅದರ ಬದಲಿಗೆ ಸುಖ-ಹಿತವನ್ನುಂಟುಮಾಡುವ ಪ್ರಚೋದನೆಗಳಿಗೆ ಎಡತಾಕುವುದು ಇದ್‌ನ ಸ್ವಭಾವ. ಸುಖ ಪಡಲು, ಖುಷಿ ಹೊಂದಲು 'ಇದ್' ಹಾತೊರೆಯುತ್ತದೆ. ಯಾವುದೇ ಸಾಧಕ-ಬಾಧಕಗಳನ್ನು ಆಲೋಚಿಸುವುದಿಲ್ಲ. ವಾಸ್ತವಿಕತೆಯನ್ನಾಗಲೀ, ಧರ್ಮ-ಅಧರ್ಮಗಳನ್ನಾಗಲೀ ಪರಿಗಣಿಸುವುದಿಲ್ಲ. ಸುಖ ಪಡುವ ಒಂದೇ ಗುರಿ, ಒಂದೇ ಲಕ್ಷ್ಯದಿಂದ ಕೆಲಸ ಮಾಡುವ 'ಇದ್' ಅನಾಗರಿಕ (Primitive) ಎನ್ನಲಾಗುತ್ತದೆ. ಮೊದಲ ಒಂದೂವರೆ-ಎರಡು ವರ್ಷಗಳ ಅವಧಿಯಲ್ಲಿ 'ಇದ್' ಒಂದೇ ಮಗುವಿನ ಮನಸ್ಸಾಗುತ್ತದೆ. ಅನಂತರವೂ 'ಇದ್' ಸದಾ ಮೇಲುಗೈ ಸಾಧಿಸಲು ಪ್ರಯತ್ನಿಸುತ್ತದೆ. ಮಗುವಿನ ಆಸೆ-ಬಯಕೆಗಳನ್ನು ಪೂರೈಸಲು ತುದಿಗಾಲ ಮೇಲೆ ನಿಂತ

ತಂದೆತಾಯಿಗಳು, ಮನೆಯವರು ಮಗುವಿನ 'ಇದ್' ಮೇಲುಗೈ ಸಾಧಿಸಲು ಪ್ರಚೋದನೆ ನೀಡುತ್ತಾರೆ. ಒಂದೇ ಮಗು, ಒಂದೇ ಗಂಡು ಮಗು, ಕೊನೆಯ ಪ್ರೀತಿಯ ಮಗು, ಬಹು ಕಾಲದ ನಂತರ ಹುಟ್ಟಿದ ಮಗು ಈ ರೀತಿ ಹೆತ್ತವರ ಅತಿಪ್ರೀತಿಗೆ ಒಳಗಾಗಿ ಬಲವಾದ ಇದ್ ಅನ್ನು ಬೆಳೆಸಿಕೊಳ್ಳುತ್ತದೆ. ಇದು ಬಲವಾದಷ್ಟೂ, ವ್ಯಕ್ತಿ ಸ್ವಾರ್ಥಿಯಾಗುತ್ತಾನೆ. ಹಠಮಾರಿಯಾಗುತ್ತಾನೆ. ತನ್ನ ಬೇಕುಗಳ ಮೇಲಿನ ಹತೋಟಿ ಕಳೆದುಕೊಂಡು, ಸುಖಲೋಲುಪನಾಗುತ್ತಾನೆ. ಸಮಾಜಕಂಟಕನೂ ಆಗಬಹುದು.

**2. ಈಗೋ** : ಮನಸ್ಸಿನ ಬೆಳವಣಿಗೆಯ ಎರಡನೇ ಹಂತವಾಗಿ ಈಗೋ ರೂಪುಗೊಳ್ಳುತ್ತದೆ. ಮಗುವಿಗೆ ಒಂದೂವರೆ ವರ್ಷ ವಯಸ್ಸಾಗುತ್ತಿದ್ದಂತೆ, ವಾಸ್ತವಿಕ ಪ್ರಜ್ಞೆ ಬರತೊಡಗುತ್ತದೆ. ಹಸಿವಾದಾಗ ಆಹಾರಕ್ಕೆ ಅಳಬೇಕೆನಿಸಿದರೂ, ತಾಯಿ ಅಥವಾ ಇನ್ಯಾರೂ ಇಲ್ಲದಿದ್ದಾಗ ಅತ್ತರೆ ಪ್ರಯೋಜನವಿಲ್ಲ ಎಂಬುದು ಅದಕ್ಕೆ ಈಗ ಅರ್ಥವಾಗತೊಡಗುತ್ತದೆ. ಅದಕ್ಕೆ ತಕ್ಕಂತೆ ತನ್ನ ಬೇಕುಗಳನ್ನು ಮುಂದೂಡಲು ಮಗುವಿಗೆ ಸಾಧ್ಯವಾಗುತ್ತದೆ. ಇದೇ ಈಗೋ. ಇದ್‌ನಂತೆ ಈಗೋ ಮೊಂಡತನ ಮಾಡುವುದಿಲ್ಲ. ಅಸಂಬದ್ಧವಾಗಿ ವರ್ತಿಸುವುದಿಲ್ಲ. ಈಗೋಗೆ ಸಕಾರಣವಾಗಿ, ವಸ್ತುನಿಷ್ಠವಾಗಿ ಆಲೋಚಿಸಲು ಮತ್ತು ನಿರ್ಧಾರ ತೆಗೆದುಕೊಳ್ಳಲು ಶಕ್ತಿ ಇದೆ. ಮಗು ಬೆಳೆಯುತ್ತಿದ್ದಂತೆ ಈಗೋ ಬಲವಾಗಬೇಕು. ತಂದೆ-ತಾಯಿಗಳ, ಶಿಕ್ಷಕರ ಮಾರ್ಗದರ್ಶನ ಇದಕ್ಕೆ ಅತ್ಯಗತ್ಯ. ಬಲವಾದ ಈಗೋ ಆರೋಗ್ಯವಂತ ಮನಸ್ಸಿನ ಲಕ್ಷಣ.

**3. ಸುಪರ್ ಈಗೋ:** ಮನಸ್ಸಿನ ಈ ಭಾಗ ವಿಕಾಸವಾಗುವುದು ಮಗುವಿಗೆ ಐದಾರು ವರ್ಷಗಳ ನಂತರ. ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು, ಯಾವುದು ಸರಿ, ಯಾವುದು ತಪ್ಪು, ಧರ್ಮಮಾರ್ಗ ಯಾವುದು, ಜೀವನ ಮೌಲ್ಯಗಳು ಯಾವುವು, ಸಮಾಜ ಮತ್ತು ಕಾನೂನು ರೂಪಿಸಿರುವ ನೀತಿ-ನಿಯಮಾವಳಿಗಳಾವುವು ಎಂಬುದನ್ನು ಅರ್ಥಮಾಡಿಕೊಂಡು ಪಾಲಿಸುವುದು ಸುಪರ್ ಈಗೋವಿನ ಕೆಲಸ. ಗೊಂದಲ, ದ್ವಂದ್ವಕ್ಕೆ ಅವಕಾಶವಿಲ್ಲದೆ, ಸ್ಪಷ್ಟವಾಗಿ, ತಂದೆತಾಯಿಗಳು, ಶಿಕ್ಷಕರು, ಸಮಾಜ ಈ ನೀತಿನಿಯಮಾವಳಿಗಳನ್ನು ಮಕ್ಕಳಿಗೆ ಕಲಿಸಬೇಕು. ಹೀಗೆ ಕಲಿಸುವಾಗ, ಕಲಿಸುವವರು ಮಕ್ಕಳಿಗೆ ಮಾದರಿಯಾಗಿರಬೇಕು. ನೀತಿನಿಯಮಾವಳಿಗಳನ್ನು ತಾವು ಪಾಲಿಸಿ, ಅದರಿಂದ ಉಂಟಾಗುವ ಸತ್ಪರಿಣಾಮಗಳ ಬಗ್ಗೆ ಮಕ್ಕಳಿಗೆ ತಿಳಿಯಹೇಳಬೇಕು. ಆದರೆ ಇಂದಿನ ಸಮಾಜದಲ್ಲಿ ಆಗುತ್ತಿರುವುದೇ ಬೇರೆ. ಪಾಠ ಪ್ರವಚನಗಳಲ್ಲಿ ನೀತಿ ನಿಯಮಗಳನ್ನು ಬೋಧಿಸುವ ಸಮಾಜದ ನಾಯಕರಲ್ಲಿ ಅನೇಕ ಜನ, ತಮ್ಮ ವೈಯಕ್ತಿಕ ಬದುಕಿನಲ್ಲಿ ಹಾಗೂ ಸಮುದಾಯದ ಬದುಕಿನಲ್ಲಿ ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುತ್ತಾರೆ. ತಮ್ಮ ಬೇಕುಗಳ ಪೂರೈಕೆಗೆ ಅಡ್ಡದಾರಿ ಹಿಡಿಯುತ್ತಾರೆ. ಸಮಯ ಸಾಧಕತನವನ್ನು ತೋರಿಸುತ್ತಾರೆ. ನ್ಯಾಯ ಧರ್ಮಗಳನ್ನು ಗಾಳಿಗೆ ತೂರುತ್ತಾರೆ. ಅನುಕೂಲ-ಸಿಂಧು ನೀತಿಯನ್ನೇ ಅನುಸರಿಸುತ್ತಾರೆ. ನವನಾಗರಿಕತೆಯ ಹೆಸರಿನಲ್ಲಿ 'ಇದ್'ನ ಬೇಡಿಕೆಗಳನ್ನು ಪೂರೈಸಿಕೊಳ್ಳುವುದಕ್ಕೆ ಹೆಚ್ಚು ಆಸಕ್ತಿ ತೋರಿಸುತ್ತಾರೆ. ಕಾಮ, ಕ್ರೋಧ, ಮೋಹ, ಮದ, ಮಾತ್ಸರ್ಯಗಳಂತಹ ಆತ್ಮ ಘಾತುಕ ಹಾಗೂ ಸಮಾಜ ಕಂಟಕ ಪ್ರವೃತ್ತಿಯನ್ನೇ ತೋರುತ್ತಾರೆ. ಇದು ಮಕ್ಕಳ

ಮನಸ್ಸಿನಲ್ಲಿ ಗೊಂದಲ, ಸಿನಿಕತನವನ್ನುಂಟು ಮಾಡುತ್ತದೆ. ಅವರ ಸುಪರ್ ಈಗೋ ದುರ್ಬಲವಾಗುತ್ತದೆ. 'ಇದ್' ಎಲ್ಲ ರಂಗದಲ್ಲೂ ವಿಜೃಂಭಿಸುತ್ತಿದೆ. ಇದು ವ್ಯಕ್ತಿ ಹಾಗೂ ಸಮಾಜದ ಸಮತೋಲನ, ನೆಮ್ಮದಿಯನ್ನು ಕಲಕಿದೆ.

ಸಿಗ್ಮಂಡ್‌ಫ್ರಾಯ್ಡ್ ಮನಸ್ಸಿನ ಈ ಮೂರೂ ವಿಭಾಗಗಳ ಬೆಳವಣಿಗೆಯನ್ನು ಈ ಮುಂದಿನ ಹಲವು ಹಂತಗಳಲ್ಲಿ ವಿವರಿಸುತ್ತಾನೆ.

**1. ಬಾಯಿಹಂತ** (ಒರಲ್ ಸ್ಟೇಜ್): ಇದು ಮನೋವಿಕಾಸದ ಮೊದಲ ಹಂತ. ಮಗುವಿನ ಬೇಡಿಕೆಗಳು, ಅಗತ್ಯಗಳು, ಸಂವೇದನೆ, ಅಭಿವ್ಯಕ್ತಿ ಎಲ್ಲವೂ ಬಾಯಿ, ತುಟಿ, ನಾಲಿಗೆ ಇತ್ಯಾದಿ 'ಬಾಯಿ'ಗೆ ಸಂಬಂಧಪಟ್ಟ ಉಪಾಂಗಗಳಲ್ಲಿ ಕೇಂದ್ರೀಕೃತವಾಗಿರುತ್ತದೆ.

ಅತಿಯಾದ ಬಾಯಿ ಹಂತದ ತೃಪ್ತಿ ಅಥವಾ ಅತೃಪ್ತಿಯಿಂದ ವ್ಯಕ್ತಿಯಲ್ಲಿ ಕೆಲವು ವ್ಯಕ್ತಿ ವಿಶೇಷಗಳು ಕಂಡುಬರುತ್ತವೆ; ವಿಪರೀತ ಆಶಾವಾದ, ತನ್ನನ್ನು ತಾನೇ ಹೆಚ್ಚಾಗಿ ಇಷ್ಟಪಡುವುದು, ಹಠಮಾರಿತನ ಅಥವಾ ನಿರಾಶಾವಾದ, ಪರಾವಲಂಬಿತನ, ಮತ್ಸರ ಇತ್ಯಾದಿ.

ಮಗು ತೃಪ್ತಿಕರವಾಗಿ ಈ ಬಾಯಿಹಂತವನ್ನು ದಾಟಿದ್ದಾದರೆ ಅದು ಪರಾವಲಂಬಿಯಾಗದೇ, ಸ್ವಾವಲಂಬಿಯಾಗುತ್ತದೆ. ಕೊಟ್ಟು-ಪಡೆದು ಸಂತೋಷಿಸುತ್ತದೆ. ಹೊಂದಿಕೊಂಡು ಬಾಳುವ ಕೌಶಲ ಕರಗತವಾಗುತ್ತದೆ. ಇತರರಲ್ಲಿ ವಿಶ್ವಾಸವಿಡಲು ಹಾಗೂ ಸುರಕ್ಷಿತ ಭಾವನೆ ಹೊಂದಲು ಸಾಧ್ಯವಾಗುತ್ತದೆ.

**2. ಗುದ ಹಂತ :** ಮಗುವಿಗೆ ಮೂರು ವರ್ಷ ವಯಸ್ಸಾಗುವ ತನಕ ಗುದಭಾಗ, ಮಗುವಿನ ಆಕರ್ಷಣೆ ಆಸಕ್ತಿಯ ಅಂಗವಾಗುತ್ತದೆ. ಮಲಮೂತ್ರವನ್ನು ಹಿಡಿದಿಡುವುದು ಅಥವಾ ವಿಸರ್ಜಿಸುವುದು 'ಸುಖದಾಯಕ' ಕ್ರಿಯೆಗಳಾಗುತ್ತವೆ. ಮಲಮೂತ್ರವಿಸರ್ಜನೆ ಹತೋಟಿ ಬಗ್ಗೆ ತಂದೆತಾಯಿಗಳ ನಿರ್ಲಕ್ಷ್ಯ ಅಥವಾ ಅತಿ ಶಿಸ್ತು ಉಂಟಾದರೆ ಈ ಹಂತದಲ್ಲಿ ಮಗು ಗೊಂದಲಕ್ಕೀಡಾಗಲು ಪ್ರೇರಕವಾಗುತ್ತದೆ. ಈ ಹಂತದಲ್ಲಿ ಮಗು ಸಾಧಿಸಬೇಕಾದ ಕೌಶಲವೆಂದರೆ, ತಂದೆ ತಾಯಿಗಳ ಅವಲಂಬನೆಯನ್ನು ತಗ್ಗಿಸಿ, ತಾನು ಹೆಚ್ಚು ಸ್ವತಂತ್ರನಾಗುವುದು, ಸ್ವಾವಲಂಬಿಯಾಗುವುದು. ಈ ಹಂತವನ್ನು ಸಫಲವಾಗಿ ದಾಟಿದ ಮಗು, ಮುಂದೆ ಉತ್ಸಾಹದ, ಆತ್ಮವಿಶ್ವಾಸ ಉಳ್ಳ ವ್ಯಕ್ತಿಯಾಗುತ್ತಾನೆ.

**3. ಶಿಶ್ನದ ಹಂತ** (ಫ್ಯಾಲಿಕ್ ಸ್ಟೇಜ್): ಜನನಾಂಗಗಳು ಮಗುವಿನ ಆಸಕ್ತಿ, ಸಂವೇದನೆ ಮತ್ತು ಅಭಿವ್ಯಕ್ತಿಯ ಕೇಂದ್ರವಾಗುತ್ತದೆ. ಇದು ಮೂರನೇ ವರ್ಷ ವಯಸ್ಸಿನಿಂದ ಐದು ವರ್ಷ ವಯಸ್ಸಿನವರೆಗೆ ಉಳಿಯುತ್ತದೆ. ಜನನಾಂಗಗಳನ್ನು ಸ್ಪರ್ಶಿಸುವುದು, ಜನನಾಂಗದೊಡನೆ ಆಟವಾಡುವುದು ಮಗುವಿಗೆ ಸುಖದಾಯಕ ಕ್ರಿಯೆಯಾಗುತ್ತದೆ. ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಲ್ಲೂ 'ಶಿಶ್ನ' ಆಕರ್ಷಣೆಯ ಕೇಂದ್ರ ಎನ್ನುತ್ತಾನೆ ಫ್ರಾಯ್ಡ್. ತನಗೆ ಶಿಶ್ನವಿದೆ ಎಂದು ಗಂಡು ಮಗು ಹೆಮ್ಮೆ - ಸಂತೋಷ ಪಟ್ಟರೆ. ಅದು ತನಗಿಲ್ಲವಲ್ಲ ಎಂದು ಹೆಣ್ಣು ಮಗು ಖಿನ್ನವಾಗುತ್ತದೆ. ತನ್ನ ಅಂಗವನ್ನು ಯಾರೋ

ತೆಗೆದು ಹಾಕಿಬಿಟ್ಟಿದ್ದಾರೆ (ಕ್ಯಾಸ್ಟ್ರೇಶನ್) ಎಂದು ಹೆಣ್ಣು ಮಗು ಭಾವಿಸುತ್ತದಂತೆ. ಈ ಹಂತದಲ್ಲಿ ಗಂಡು ಮಗು ತನ್ನ ತಾಯಿಯ ಬಗ್ಗೆ ಮೋಹಗೊಳ್ಳುವುದು (ಈಡಿಪಸ್ ಕಾಂಪ್ಲೆಕ್ಸ್), ಹೆಣ್ಣು ಮಗು ತನ್ನ ತಂದೆಯ ಬಗ್ಗೆ ಮೋಹಗೊಳ್ಳುವುದು (ಎಲೆಕ್ಟ್ರಾ ಕಾಂಪ್ಲೆಕ್ಸ್) ಎಂದು ಹೇಳಿ ಫ್ರಾಯ್ಡ್ ಎಲ್ಲರನ್ನು ಚಕಿತಗೊಳಿಸಿದ. ಗಂಡುಮಗು, ತನ್ನ ತಾಯಿಯ ಸಾಮಾನ್ಯ ಅಂಗ ಸಂಗವನ್ನು ಬಯಸುತ್ತದೆ. ತಂದೆಯನ್ನು ತನ್ನ ಪ್ರತಿಸ್ಪರ್ಧಿಯಂತೆ ಕಾಣುತ್ತದೆ. ತಂದೆ ತನ್ನನ್ನು ಈ ಬಯಕೆಗಾಗಿ ಶಿಕ್ಷಿಸುತ್ತಾನೆ(ಕ್ಯಾಸ್ಟ್ರೇಶನ್ ಆಂಕ್ಸೈಟಿ) ಎಂದು ಅದು ವ್ಯಾಕುಲಗೊಳ್ಳುತ್ತದೆ ಎಂದು ವಿವರಿಸಿ, ಈ ವ್ಯಾಕುಲತೆ ಸರಿಯಾದ ರೀತಿಯಲ್ಲಿ ಪರಿಹಾರವನ್ನು ಕಂಡುಕೊಳ್ಳದಿದ್ದರೆ - ಇದರ ದುಷ್ಪರಿಣಾಮ ಬಹಳ ವ್ಯಾಪಕವಾದದ್ದು ಎಂದು ಫ್ರಾಯ್ಡ್ ನಂಬಿದ. ವಯಸ್ಕರಲ್ಲಿ ಕಂಡು ಬರುವ ಅನೇಕ ಅಲ್ಪಮಟ್ಟದ ಮಾನಸಿಕ ಅಸ್ವಸ್ಥತೆಗಳಿಗೆ (ನ್ಯೂರೋಸಿಸ್) ಪರಿಹಾರವಾಗದ ಈಡಿಪಸ್, ಎಲೆಕ್ಟ್ರಾ ಕಾಂಪ್ಲೆಕ್ಸ್‌ಗಳೇ ಕಾರಣ ಎಂದು ಆತ ವಿವರಿಸಿದ್ದಾನೆ. ಈ ಹಂತವನ್ನು ಯಶಸ್ವಿಯಾಗಿ ದಾಟಬಲ್ಲ ವ್ಯಕ್ತಿ, ಆತ್ಮ ವಿಶ್ವಾಸ ಉಳ್ಳವನಾಗುತ್ತಾನೆ. ಕಷ್ಟನಷ್ಟಗಳನ್ನು ಧೈರ್ಯವಾಗಿ ಎದುರಿಸಬಲ್ಲವನಾಗುತ್ತಾನೆ. ತನ್ನ ಪುರುಷತನ( ಅಥವಾ ಸ್ತ್ರೀತನ)ದ ಬಗ್ಗೆ ಹೆಮ್ಮೆ ಪಡುವಂತವನಾಗುತ್ತಾನೆ.

**4. ಅವ್ಯಕ್ತ ಹಂತ** (ಲೇಟೆನ್ಸಿ ಸ್ಟೇಜ್): ಇದು ಐದಾರು ವರ್ಷ ವಯಸ್ಸಿನಿಂದ 13 ವರ್ಷ ವಯಸ್ಸಿನವರೆಗೆ ಉಳಿಯುತ್ತದೆ. ಈ ಅವಧಿಯಲ್ಲಿ ಈಗೋ ಮತ್ತು ಸುಪರ್ ಈಗೋ ಬಲಗೊಳ್ಳುತ್ತವೆ. ಯಾವುದೇ ಲೈಂಗಿಕ ಆಸಕ್ತಿ ಕಾಣಬರುವುದಿಲ್ಲ. ಹುಡುಗ- ಹುಡುಗರೊಂದಿಗೆ, ಹುಡುಗಿ-ಹುಡುಗಿಯರೊಂದಿಗೆ ಹೆಚ್ಚು ಸ್ನೇಹ-ವಿಶ್ವಾಸ-ನಂಬಿಕೆಯ ಮನೋಭಾವನೆಯನ್ನು ತೋರುತ್ತಾರೆ. ಈ ಹಂತದಲ್ಲಿ ಗಾಢವಾದ ಸಂಬಂಧ-ಆಸರೆಯನ್ನು ಕಾಣಬಹುದು (ಲೈಂಗಿಕತೆಯ ಸೋಂಕಿರುವುದಿಲ್ಲ). ಪುರುಷತನ, ಸ್ತ್ರೀತನದ ಗುಣಲಕ್ಷಣಗಳು, ನಡವಳಿಕೆಗಳು ಚೆನ್ನಾಗಿ ಬೇರೂರುತ್ತವೆ. ವ್ಯಕ್ತಿತ್ವ ಮತ್ತಷ್ಟು ದೃಢಗೊಳ್ಳುತ್ತದೆ.

**5. ಜನನಾಂಗದ ಹಂತ** (ಜೆನೈಟಲ್ ಸ್ಟೇಜ್): ಇದು ಹದಿಹರೆಯದ ಅವಧಿಯ ಮನೋವಿಕಾಸ. ಪುರುಷತನ ಅಥವಾ ಸ್ತ್ರೀತನದ ಎಲ್ಲ ಲಕ್ಷಣಗಳು ಪೂರ್ಣವಾಗಿ ವಿಕಸನಗೊಳ್ಳುತ್ತವೆ. ಹುಡುಗನಿಗೆ ಹುಡುಗಿಯಲ್ಲಿ, ಹುಡುಗಿಗೆ ಹುಡುಗನಲ್ಲಿ ಆಕರ್ಷಣೆ ಮೂಡತೊಡಗುತ್ತದೆ. ದಾಂಪತ್ಯ ಜೀವನಕ್ಕೆ ಬೇಕಾದ ಲೈಂಗಿಕಾಸಕ್ತಿ, ಲೈಂಗಿಕ ಕ್ರಿಯೆ ನಡೆಸುವುದಕ್ಕೆ ಬೇಕಾದ ಸಿದ್ಧತೆಗಳು (ಹಸ್ತಮೈಥುನ, ಲೈಂಗಿಕ ಜೀವನದ ಬಗ್ಗೆ ಕಲ್ಪನೆಗಳು, ಸಂಗಾತಿಯ ಆಯ್ಕೆ, ಪ್ರೀತಿ/ಪ್ರೇಮಗಳು ಇತ್ಯಾದಿ) ನಡೆಯುತ್ತವೆ. ಈ ಅವಧಿಯಲ್ಲಿ ಮದುವೆಯೂ ನಡೆದುಹೋದರೆ ಗರ್ಭಧಾರಣೆ, ಮಗುವಿನ ಜನನ, ಅದರ ಲಾಲನೆ ಪಾಲನೆಗೆ ಮನಸ್ಸು ಸಿದ್ಧವಾಗಬೇಕಾಗುತ್ತದೆ. ಹೀಗಾಗಿ ಈ ಹಂತದ ಮನೋವಿಕಾಸದ ಗುರಿ, ಪೂರ್ಣ ಸ್ವಾವಲಂಬನೆ. ವ್ಯಕ್ತಿ ತನ್ನದೇ ಆದ ಕುಟುಂಬ ಜೀವನಕ್ಕೆ ಬೇಕಾಗುವ ಎಲ್ಲ ಕೌಶಲಗಳನ್ನು ಕಲಿಯುವುದು, ಲೈಂಗಿಕ ಜೀವನದ ಅಗತ್ಯಗಳನ್ನು ಗಮನಿಸುವುದು. ಈ ಗುರಿಯಲ್ಲಿ ಸಫಲನಾಗದಿದ್ದರೆ ವ್ಯಕ್ತಿತ್ವ ದೋಷ, ಮಾನಸಿಕ ಅಸ್ವಸ್ಥತೆಗಳು ಕಾಣಿಸಿಕೊಳ್ಳುತ್ತವೆ.

ಮಗುವಿನ ಮನೋವಿಕಾಸದ ಮೇಲೆ ಪ್ರಭಾವ ಬೀರುವ ಅಂಶಗಳಲ್ಲಿ ಮುಖ್ಯವಾದುವೆಂದರೆ :

**1. ಪೌಷ್ಟಿಕಾಂಶಗಳು:** ಆಹಾರದಲ್ಲಿರುವ ಪಿಷ್ಟಪದಾರ್ಥ, ಪ್ರೋಟೀನು, ಕೊಬ್ಬು ವಿಟಮಿನ್‌ಗಳು, ಖನಿಜ ಲವಣಾಂಶಗಳು, ದೇಹದ ಬೆಳವಣಿಗೆಗೆ ಅಗತ್ಯವಾಗಿರುವಂತೆ, ಮನೋವಿಕಾಸಕ್ಕೂ ಅಗತ್ಯ. ಪ್ರೋಟೀನ್ ಕೊರತೆಯಿಂದ ಮಿದುಳಿನ ಬೆಳವಣಿಗೆಗೆ ಧಕ್ಕೆಯಾಗಿ, ಮನೋವಿಕಾಸ ಕುಂಠಿತವಾಗುತ್ತದೆ. ಕಬ್ಬಿಣಾಂಶದ ಕೊರತೆಯಿಂದ, ರಕ್ತದಲ್ಲಿ ಹಿಮೋಗ್ಲಾಬಿನ್ ಅಂಶ ಕಡಿಮೆಯಾಗಿ, ಮಗುವಿನ ಕಲಿಕೆಯ ಸಾಮರ್ಥ್ಯ ಕುಂಠಿತವಾಗುತ್ತದೆ. ಆಹಾರದಲ್ಲಿ ಅಯೋಡಿನ್ ಕಡಿಮೆಯಾದಾಗ, ಥೈರಾಕ್ಸಿನ್ ರಸದೂತದ ಕೊರತೆಯುಂಟಾಗಿ ಮಗು 'ಹೈಪೋಥೈರಾಯಿಡಿಸಂ'- 'ಕ್ರಿಟಿನಿಸಂ' ಕಾಯಿಲೆಗೆ ಒಳಗಾಗಿ ಬುದ್ಧಿಮಾಂದ್ಯತೆಯಿಂದ ಬಳಲಬಹುದು.

**2. ಶಾರೀರಕ ನ್ಯೂನತೆಗಳು ಮತ್ತು ಕಾಯಿಲೆಗಳು:** ದೃಷ್ಟಿದೋಷ, ಶ್ರವಣದೋಷ, ಕೈಕಾಲು ಊನ ಇತ್ಯಾದಿ ಅಂಗವಿಕಲತೆಗಳು, ಮಗುವನ್ನು ತೀವ್ರವಾಗಿ ಕಾಡುವ ಮಿದುಳಜ್ವರ, ಪದೇ ಪದೇ ವಾಂತಿ, ಬೇಧಿ, ಫಿಟ್ಸ್ ಅಥವಾ ಧೀರ್ಘ ಕಾಲದ ಕಾಯಿಲೆಗಳಾದ ಅಸ್ತಮಾ, ಹೃದ್ರೋಗ, ಚರ್ಮರೋಗಗಳು, ಕಿವಿ, ಮೂಗು, ಗಂಟಲ ಸಮಸ್ಯೆಗಳು ಮನೋವಿಕಾಸಕ್ಕೆ ಅಡ್ಡಿಯುಂಟುಮಾಡಬಹುದು.

**3. ರಸದೂತಗಳು:** ನಿರ್ನಾಳಗ್ರಂಥಿಗಳು ಶ್ರವಿಸುವ ರಸದೂತಗಳು ಮನೋವಿಕಾಸದ ಮೇಲೆ ಪ್ರಭಾವ ಬೀರುತ್ತವೆ. ಉದಾ: ಥೈರಾಕ್ಸಿನ್ ರಸದೂತದ ಕೊರತೆ ಮಾನಸಿಕ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಲೈಂಗಿಕರಸದೂತದ ಕೊರತೆಯಿಂದ, ಲೈಂಗಿಕ ಲಕ್ಷಣಗಳು ಮೂಡದೇ ಹೋಗಬಹುದು. ಅದರ ಹೆಚ್ಚಳದಿಂದ ಅಕಾಲ - ಲೈಂಗಿಕ ಪ್ರೌಢತ್ವದ ಲಕ್ಷಣಗಳು ಕಾಣಿಸಿಕೊಳ್ಳಬಹುದು.

**4. ಬುದ್ಧಿಮಾಪನ** (I.Q.): ಮಗುವಿನ ಬುದ್ಧಿ-ಮಟ್ಟವು ಸಹಜವಾಗಿ, ಅದರ ಕಲಿಯುವ ಸಾಮರ್ಥ್ಯವನ್ನು ನಿರ್ಧರಿಸುತ್ತದೆ. ಸಾಧಾರಣ ಬುದ್ಧಿಮಾಪನ 85ರಿಂದ 110. 110ಕ್ಕೂ ಹೆಚ್ಚಿನ ಐ.ಕ್ಯೂ. ಹೊಂದಿರುವ ಮಗುವಿನ ಮನೋವಿಕಾಸ ಬೇಗ ಬೇಗ ಆದರೆ, 70ಕ್ಕಿಂತ ಕಡಿಮೆ ಐ-ಕ್ಯೂ ಇರುವ ಮಗುವಿನ ಮನೋವಿಕಾಸ ಕುಂಠಿತಗೊಳ್ಳುತ್ತದೆ. ಮಗುವಿನ ನಡಿಗೆ, ಮಾತು, ದೈನಂದಿನ ಕೆಲಸಗಳನ್ನು ಕಲಿಯುವುದು, ಮಲಮೂತ್ರ ವಿಸರ್ಜನೆ ಮೇಲಿನ ಹತೋಟಿ, ಓದು ಬರಹ ಎಲ್ಲವೂ ನಿಧಾನವಾಗಿ ಬಿಡುತ್ತದೆ.

**5. ಲಿಂಗ :** ಮಗು ಹೆಣ್ಣೇ ಅಥವಾ ಗಂಡೇ ಎನ್ನುವುದರ ಮೇಲೆ, ಮನೋವಿಕಾಸದ ವೇಗ ನಿರ್ಧಾರವಾಗಬಹುದು. ಉದಾ. ಗಂಡುಮಕ್ಕಳಿಗಿಂತ ಹೆಣ್ಣು ಮಕ್ಕಳು ಬೇಗ ಮತ್ತು ಚೆನ್ನಾಗಿ ಮಾತನಾಡುವುದನ್ನು ಕಲಿಯುತ್ತಾರೆ. ಭಾಷೆಯ ಮೇಲಿನ ಪ್ರಭುತ್ವ, ತರ್ಕ, ಬುದ್ಧಿ ಆಲೋಚನೆ, ಸೂಕ್ಷ್ಮ ಅವಲೋಕನ, ಕುಶಲ ಕಲೆಗಳಲ್ಲಿ ಹೆಣ್ಣುಮಕ್ಕಳದೇ

ಮೇಲುಗೈ. ಗಂಡು ಮಕ್ಕಳಗಿಂತ ಹೆಣ್ಣು ಮಕ್ಕಳು ಬೇಗ ಲೈಂಗಿಕ ಪ್ರೌಢತ್ವವನ್ನು ಪಡೆಯುತ್ತಾರೆ. ಗಂಡಸರಿಗಿಂತ ಹೆಂಗಸರು ಹೆಚ್ಚು ಕಷ್ಟಸಹಿಷ್ಣುಗಳು.

**6. ದೇಶ - ಜನಾಂಗ- ಸಂಸ್ಕೃತಿ :** ಶ್ವೇತ ವರ್ಣೀಯರಿಗೆ ಹೋಲಿಸಿದರೆ, ಭಾರತೀಯರ ಮನೋವಿಕಾಸ ಸ್ವಲ್ಪ ನಿಧಾನ. ಶ್ವೇತ ವರ್ಣದ ಮಕ್ಕಳು ಬಹುಬೇಗ ಸ್ವಾವಲಂಬಿಗಳಾದರೆ, ಭಾರತೀಯ ಮಕ್ಕಳು ಹೆಚ್ಚು ಕಾಲ ಪರಾವಲಂಬಿಗಳಾಗಿಯೇ ಉಳಿಯುತ್ತಾರೆ. ಭಾವನೆಗಳನ್ನು ಮಾತಿನ ಮೂಲಕ ಪ್ರಕಟಿಸುವುದಕ್ಕೆ ಕಷ್ಟಪಡುತ್ತಾರೆ. ಹೆಚ್ಚು ಅಂತರ್ಮುಖಿಗಳಾಗಿಯೇ ಉಳಿಯುತ್ತಾರೆ. ನಮ್ಮ ದೇಶದಲ್ಲೇ, ಗ್ರಾಮೀಣ ಮಕ್ಕಳಿಗೆ ಹೋಲಿಸಿದರೆ ನಗರ ಪ್ರದೇಶಗಳ ಮಕ್ಕಳ ಮನೋವಿಕಾಸ ವೇಗವಾಗಿ ಮತ್ತು ಬೇಗ ನಡೆಯುತ್ತದೆ.

**7. ಜನನ-ಸಂಖ್ಯೆ:** ಮೊದಲ ಮಗುವಿಗೆ ಹೋಲಿಸಿದರೆ, ಅನಂತರ ಹುಟ್ಟಿದ ಮಕ್ಕಳು ಅನೇಕ ವಿಷಯಗಳಲ್ಲಿ ಬೇಗ ವಿಕಾಸ ಹೊಂದುತ್ತಾರೆ. ಆದರೆ ಕೊನೆಯ ಮಗು ಎಲ್ಲರ ಮುದ್ದು, ಅತಿ ರಕ್ಷಣೆ ಮತ್ತು ಅತಿ ಪ್ರೀತಿಗೆ ಒಳಗಾಗಿ ಮನೋವಿಕಾಸದ ವೇಗ ತಗ್ಗುತ್ತದೆ. ಶಾರೀರಕವಾಗಿ ಬೆಳೆದರೂ, ಮಾನಸಿಕವಾಗಿ ಹಿಂದುಳಿಯುತ್ತದೆ. ದೀರ್ಘಕಾಲ ಪರಾವಲಂಬಿಯಾಗಿರುತ್ತದೆ. ಹಠಮಾರಿತನ, ಅತಿ ಸ್ವಾರ್ಥ ಹಾಗೂ ನೀತಿನಿಯಮಗಳನ್ನು ಪಾಲಿಸದಿರುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತದೆ.

**8. ಎಡ ಮತ್ತು ಬಲ ಮಿದುಳಿನ ವಿಕಾಸ:** ನಮ್ಮ ಮಿದುಳಿನ ಎಡ ಮತ್ತು ಬಲ ಅರೆಗೋಳಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಬಲ್ಲವು. ವಿಜ್ಞಾನ ಮತ್ತು ತಂತ್ರಜ್ಞಾನದ ಕಲಿಕೆ, ಭಾಷೆಗಳನ್ನು ಕಲಿತು ಸಮರ್ಥವಾಗಿ ಬಳಸುವ ಕೌಶಲ, ಗಣಿತ, ಸೂಕ್ಷ್ಮಗಳ ಅವಲೋಕನ, ತರ್ಕಬದ್ಧ ಹಾಗೂ ಅಮೂರ್ತವಾದ ಆಲೋಚನೆಗಳು ಎಡಮಿದುಳಿನ 'ವಿಶೇಷ ಲಕ್ಷಣಗಳಾದರೆ, ಕ್ಷೇತ್ರದಲ್ಲಿ ವಸ್ತುಗಳ ಪರಸ್ಪರ ಅಂತರ, ಆಕಾರವನ್ನು ಗ್ರಹಿಸುವುದು, ಭಾವನೆಗಳ ಪ್ರಕಟಣೆ, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ನೃತ್ಯಕಲೆ ಇತ್ಯಾದಿ ಲಲಿತ ಕಲೆಗಳು, ಸೌಂದರ್ಯಪ್ರಜ್ಞೆ, ಆಧ್ಯಾತ್ಮಿಕತೆ ಬಲ ಮಿದುಳಿನ ವಿಶೇಷ ಕೆಲಸಗಳು. ಯಾವ ವ್ಯಕ್ತಿಯಲ್ಲಿ ಯಾವ ಭಾಗದ ಮಿದುಳು ವಿಕಾಸಹೊಂದುತ್ತದೆ ಎನ್ನುವುದರ ಮೇಲೆ, ವ್ಯಕ್ತಿ ವಿಜ್ಞಾನಿ, ತಂತ್ರಜ್ಞನಾಗುತ್ತಾನೆಯೇ ಅಥವಾ ಕಲಾವಿದ, ತತ್ವಜ್ಞಾನಿ, ಯೋಗಿಯಾಗುತ್ತಾನೆಯೇ ಎಂಬುದು ನಿರ್ಧಾರವಾಗುತ್ತದೆ. ಪ್ರಧಾನ ಎಡ ಮಿದುಳು ಅಥವಾ ಪ್ರಧಾನ ಬಲ ಮಿದುಳು ಅಥವಾ ಪ್ರಧಾನವಾದ ಎಡ ಮತ್ತು ಬಲ ಮಿದುಳು ನಿಸರ್ಗದ ಕೊಡುಗೆ.

## ಕಲಾ ಸಾಮರ್ಥ್ಯ ಮತ್ತು ಅದರ ಬೆಳವಣಿಗೆ

ಭಾಷೆ, ಆಟ ಮತ್ತು ಕಲೆ ಅಭಿವ್ಯಕ್ತಿಯ ಮೂರು ಮುಖ್ಯ ಮಾಧ್ಯಮಗಳು. ತನ್ನ ಅನುಭವವನ್ನು, ಅನಿಸಿಕೆಗಳನ್ನು, ಆಲೋಚನೆಗಳನ್ನು, ಭಾವನೆಗಳನ್ನು ವ್ಯಕ್ತಪಡಿಸಲು ಮಗು ಮೊದಲು ಭಾಷೆಯನ್ನು, ಅನಂತರ ಆಟದ ನಡವಳಿಕೆಯನ್ನು ಹಾಗೂ ಕಲೆಯನ್ನು ಸಮರ್ಥವಾಗಿ ಬಳಸುತ್ತದೆ.




ವಯಸ್ಸು 12



ಮಿದುಳು ಹಾನಿಯಾಗಿದ್ದ 33 ವರ್ಷ ವಯಸ್ಸಿನ
ವ್ಯಕ್ತಿ ಬರೆದ ಮನುಷ್ಯನ ಚಿತ್ರ



ವಯಸ್ಸು 13





SUBJECT.

FIG. 1.—Seguin Form Board; Positions of Pieces in Three Heaps Ready for Re-insertion.

ಮಗುವಿನ ಅಭಿವ್ಯಕ್ತಿ ವಿಧಾನದಲ್ಲಿ ಎರಡು ವಿಧಗಳನ್ನು ಗುರುತಿಸಲಾಗುತ್ತದೆ. ಒಂದು ಭಾಷೆ, ಇನ್ನೊಂದು ಪ್ರತಿಮಾ ವಿಧಾನ (Iconic ability)ಈ ಪ್ರತಿಮೆ ಮುಖ್ಯವಾಗಿ ಚಿತ್ರರೂಪದಲ್ಲೇ ಇರುತ್ತದೆ. ಇವೆರಡೂ ಪರಸ್ಪರ ಪೂರಕವಾಗಿರುತ್ತದೆ. ಮಗು ಮಾತನಾಡುವುದನ್ನು ಕಲಿಯುವ ಹಂತದಲ್ಲೇ ಕೈಗೆ ಸಿಕ್ಕ ಸೀಮೆಸುಣ್ಣ, ಇದ್ದಿಲು ಅಥವಾ ಬಳಪದಿಂದ ಗೆರೆಗಳನ್ನು ಹಾಗೂ ತನ್ನದೇ ಆದ ರೀತಿಯಲ್ಲಿ ಚಿತ್ರಗಳನ್ನು ಬರೆಯಲು ಪ್ರಾರಂಭಿಸುತ್ತದೆ. ಗೋಡೆ, ನೆಲ, ಬಾಗಿಲು, ಕಾಗದ ಎಲ್ಲದರ ಮೇಲೆ ಈ ಗೆರೆ-ಚಿತ್ರಗಳನ್ನು ಬಿಡಿಸಲು ಪ್ರಾರಂಭಿಸುತ್ತದೆ. ನಮಗೆ ಕೇವಲ ಅಸಂಬದ್ಧ ಗೆರೆಗಳಂತೆ ತೋರುವ ಇವುಗಳಿಗೆ 'ವಿಶೇಷ ಅರ್ಥ'ವಿದೆ ಎನ್ನುತ್ತಾರೆ ಮನಶಾಸ್ತ್ರಜ್ಞರು. ಗೆರೆಗಳನ್ನು ಉಪಯೋಗಿಸಿ ಪ್ರತಿಮಾವಿಧಾನದಲ್ಲಿ ಅಭಿವ್ಯಕ್ತಿಸಲು ಪ್ರಯತ್ನ ಪಡುತ್ತಿರುವ ಮಗುವಿನ ಪ್ರಾರಂಭಿಕ ಚಿತ್ರಗಳಿವು. 'ಇದೇನಿದು' ಎಂದು ಮಗುವನ್ನು ಕೇಳಿ. 'ನನಗೆ ಗೊತ್ತಿಲ್ಲ' ಎಂಬ ಉತ್ತರ ಬರುತ್ತದೆ. ಪ್ರತಿಮೆಯನ್ನು ಮಾತಿನ ರೂಪದಲ್ಲಿ ಹೇಳುವ ಸಾಮರ್ಥ್ಯ ಅದಕ್ಕಿರುವುದಿಲ್ಲ. ಬದಲು 'ಇದು ನೀನಿರಬೇಕು. ಅಪ್ಪ ಇರಬೇಕು ಅಥವಾ ಟಾಮಿ ಇರಬೇಕು' ಎನ್ನಿ. ಹೌದು ಅಥವಾ ಇಲ್ಲ ಎನ್ನುವ ಉತ್ತರ ಪಡೆಯುತ್ತೀರಿ!

ಪ್ರಾರಂಭದಲ್ಲಿ ಈ ಭಾಷಾ ಬೆಳವಣಿಗೆ ಮತ್ತು ಪ್ರತಿಮಾ-ಅಭಿವ್ಯಕ್ತಿಯ ಬೆಳವಣಿಗೆ ಸಮಾನಾಂತರ ರೇಖೆಗಳಂತೆ ನಡೆಯುತ್ತದೆ. ಆನಂತರ ಅವೆರಡೂ ಜೊತೆಗೂಡುತ್ತವೆ. ಕ್ರಮೇಣ ಭಾಷಾ ಅಭಿವ್ಯಕ್ತಿಗೆ ಹೆಚ್ಚು ಪ್ರೋತ್ಸಾಹ ದೊರೆಯುವುದರಿಂದ ಅದು ಪೂರ್ಣವಾಗಿ ವಿಕಾಸಹೊಂದಿ, ಪ್ರತಿಮಾ ಅಭಿವ್ಯಕ್ತಿ ಮೂಲೆಗುಂಪಾಗುತ್ತದೆ.

## ಮನುಷ್ಯನ ಚಿತ್ರ ಬರೆಯುವ ಪರೀಕ್ಷೆ (Draw a person test)

ಬಳಪ, ಪೆನ್ಸಿಲ್ ಹಿಡಿದು ಗೆರೆ ಎಳೆದು ತನ್ನದೇ ಆದ ಚಿತ್ರಗಳನ್ನು ಬರೆಯುವ ಮಗುವಿಗೆ ಮೂರು ವರ್ಷ ವಯಸ್ಸಾಗಿರುತ್ತದೆ. ಈ ವಯಸ್ಸಿನ ನಂತರ, ಯಾವುದೇ ಮಗುವಿಗೆ 'ಮನುಷ್ಯನ ಒಂದು ಚಿತ್ರ ಬರಿ' ಎಂದು ಹೇಳಿದರೆ, ಅದು ಬರೆಯುವ ಚಿತ್ರದ ಆಧಾರದ ಮೇಲೆ ಅದರ ಮಾನಸಿಕ ಬೆಳವಣಿಗೆಯ ಹಂತವನ್ನು ಖಚಿತವಾಗಿ ಹೇಳಬಹುದು.

ಕೆ. ಮೆಕೋವರ್(1948) ಮತ್ತು ಎಫ್. ಗುಡ್‌ಎನಫ್(1976) ಅವರು ಈ ಸರಳವಾದ ಪರೀಕ್ಷೆಯನ್ನು ಅಧ್ಯಯನಗಳಿಂದ ಒಂದು ವೈಜ್ಞಾನಿಕ ರೂಪಕ್ಕೆ ತಂದು, ಮಗುವಿನ ಬೌದ್ಧಿಕ ಬೆಳವಣಿಗೆಯನ್ನು ಅಳೆಯುವ ವಿಧಾನವಾಗಿ ರೂಪಿಸಿದರು.

ಮಗುವಿನ ಮೊದಲ 'ಮನುಷ್ಯನ ಚಿತ್ರ' ಗೊದಮೊಟ್ಟೆಯನ್ನು ಹೋಲುವುದು ಗಮನಾರ್ಹ. ತಾಯಿಯ ಗರ್ಭದಲ್ಲಿ ಫಲಿತ ಅಂಡಾಣು ವಿಭಜನೆಗೊಳ್ಳುತ್ತಾ, ಒಂದು ಜೀವಕೋಶ ಎರಡಾಗಿ, ಎರಡು ನಾಲ್ಕಾಗಿ, ನಾಲ್ಕು ಎಂಟಾಗಿ ಸಂಖ್ಯಾವೃದ್ಧಿಮಾಡಿ, ಬೆಳೆಯುತ್ತಾ ಹೋದಂತೆ, ಭ್ರೂಣ ಒಂದು ನಿರ್ದಿಷ್ಟ ಆಕಾರ ಪಡೆಯುತ್ತದೆ. ಅದು ಗೊದಮೊಟ್ಟೆಯನ್ನು(Tadpal) ಹೋಲುತ್ತದೆ. ಆಮೇಲೆ ಭ್ರೂಣ ಹಂದಿಯಂತೆ, ಅರ್ಧಪ್ರಾಣಿ, ಅರ್ಧ ಮನುಷ್ಯನಂತೆ (ನಮ್ಮ ದಶಾವತಾರದ ನರಸಿಂಹನಂತೆ) ಬಳಿಕ ಮನುಷ್ಯನಂತೆ

(ವಾಮನ) ಕಾಣುತ್ತದೆ. ಮಗುವಿನ ಮೊದಲ ಮನುಷ್ಯ ಚಿತ್ರ ಗೊದಮೊಟ್ಟೆಯಂತೆ, ಪ್ರಾಣಿಯಂತೆ ಕಾಣುವುದಕ್ಕೂ ಭ್ರೂಣದ ಬೆಳವಣಿಗೆಯ ಹಂತಗಳಿಗೂ ಸಂಬಂಧವಿರಲೇಬೇಕು.

ಗೊದಮೊಟ್ಟೆ ಮನುಷ್ಯನ ಚಿತ್ರವಾದ ಮೇಲೆ, ಕಡ್ಡಿ ಮನುಷ್ಯನ ಚಿತ್ರ ಕಾಣಿಸಿಕೊಳ್ಳುತ್ತದೆ. ಮಗುವಿನ ಮಾನಸಿಕ ವಯಸ್ಸು ಬೆಳೆಯುತ್ತಿದ್ದಂತೆ, ಮನುಷ್ಯನ ಚಿತ್ರಗಳಲ್ಲಿ ಆಗುವ ಬದಲಾವಣೆಗಳು ಸೇರ್ಪಡೆಯಾಗುವ ವಿವರಗಳನ್ನು ಗಮನಿಸಿ. (ಚಿತ್ರ ನೋಡಿ: ವಯಸ್ಸು 4 ರಿಂದ ವಯಸ್ಸು 13).

ಮಗು ಚಿತ್ರ ಬಿಡಿಸುವಾಗ, ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುವುದನ್ನು ನೀವು ಗಮನಿಸಿರಬಹುದು. ಪಕ್ಕದಲ್ಲಿದ್ದು ಕೇಳಿಸಿಕೊಳ್ಳಿ. ಹಾಗೆಯೇ ಬರೆಯುತ್ತಿರವ ಚಿತ್ರದ ಬಗ್ಗೆ, ಆ ಮನುಷ್ಯನ ಬಗ್ಗೆ, ನಡವಳಿಕೆ ಬಗ್ಗೆ, ಮಗು ಮತ್ತು ಆ ಮನುಷ್ಯನ ಸಂಬಂಧದ ಬಗ್ಗೆ ಕೇಳಿ ನಿಮಗೆ ಆಶ್ಚರ್ಯವಾಗುವಂತೆ, ಮಗು ವಿವರಣೆ ಕೊಡುತ್ತಾ ಹೋಗುತ್ತದೆ. ಮಗುವಿನ ಮನಸ್ಸಿನ 'ವಿಶ್ವರೂಪದರ್ಶನ'ವಾಗುತ್ತದೆ.

"ಬಹಳ ಮಂಕಾಗಿಬಿಟ್ಟಿದ್ದಾನೆ. ಶಾಲೆಗೆ ಹೋಗುತ್ತಿಲ್ಲ. ಸದಾ ಏನೋ ಕಳೆದುಕೊಂಡಂತೆ ಮುಖ ಮಾಡಿ ನಿಂತಿರುತ್ತಾನೆ. ನಾವು ಇವನಿಗೇನೂ ಕಡಿಮೆ ಮಾಡಿಲ್ಲ. ಒಳ್ಳೆಯ ಸ್ಕೂಲಿಗೆ ಸೇರಿಸಿದ್ದೇವೆ. ಟೀಚರ್ಸ್ ಬಹಳ ಒಳ್ಳೆಯವರು. ಹೊಡೆಯದೆ, ಬೈಯದೇ ಪಾಠ ಹೇಳಿಕೊಡುತ್ತಾರೆ. ಮನೆಯವರಿಗೆಲ್ಲ ಇವನನ್ನು ಕಂಡರೆ ಬಹಳ ಪ್ರೀತಿ. ಇವನಿಗೇನಾಗಿದೆ ಎಂದು ನಮಗೆ ಅರ್ಥವಾಗುತ್ತಿಲ್ಲ. ನೀವು ಮನೋವೈದ್ಯರು. ನೀವಾದರೂ ಇವನ ಮನಸ್ಸಿನಲ್ಲಿ ಏನಿದೆ ಎಂದು ಕಂಡು ಹಿಡಿದು ಹೇಳಿ ಸರ್. ಇವನು ಮೊದಲಿನಂತೆ ನಗು ನಗುತ್ತಾ ಇರುವಂತಾದರೆ ಸಾಕು" ಎಂದರು ಕಿರಣನ ತಂದೆ ನಾಗರಾಜಯ್ಯ. ಕಿರಣನಿಗೆ ವಯಸ್ಸು ಹತ್ತು. ನಾಲ್ಕನೇ ತರಗತಿಯಲ್ಲಿ ಓದುತ್ತಿದ್ದಾನೆ. ಚುರುಕಾಗಿ ಆಟಪಾಠಗಳಲ್ಲಿ ಮುಂದಿದ್ದ ಹುಡುಗ ಈಗ ಕಳೆದ ನಾಲ್ಕು ತಿಂಗಳುಗಳಿಂದ ಮಂಕಾಗಿಬಿಟ್ಟಿದ್ದಾನೆ. ಆತನಿಗೆ ಕುಟುಂಬ, ಶಾಲೆ, ನೆರೆಹೊರೆಯಲ್ಲಿರುವ ತೊಂದರೆ, ಕೊರತೆಯೂ ಇದ್ದಂತೆ ಕಾಣುವುದಿಲ್ಲ. ಏನು ಮರಿ. ಏನು ನಿನ್ನ ಕಷ್ಟ ಎಂದರೆ ಬಾಯಿ ಬಿಡುವುದಿಲ್ಲ. ತಲೆ ತಗ್ಗಿಸಿ, ನೆಲ ನೋಡುತ್ತಾ ನಿಲ್ಲುತ್ತಾನೆ. ವೈದ್ಯರು 'ಆಟದ ಚಿಕಿತ್ಸೆ ಕೊಠಡಿಗೆ (Play therapy room) ಕರೆದುಕೊಂಡು ಹೋಗಿ, ನಿನಗೆ ಇಷ್ಟ ಬಂದಂತೆ ಆಡು ಎಂದರು. ಅಲ್ಲಿದ್ದ ಆಟದ ಸಾಮಾನುಗಳು ಕಿರಣನನ್ನು ಆಕರ್ಷಿಸಿದುವು. ವೈದ್ಯರನ್ನು ಮರೆತು ಸ್ವಲ್ಪ ಹೊತ್ತು ಆಟವಾಡಿದ.

'ಕಿರಣ್ ನಿನಗೆ ಚಿತ್ರ ಬಿಡಿಸಲು ಬರುತ್ತಾ. ನಾನು ನಿನಗೆ ಪೇಪರ್, ಬಣ್ಣದ ಪೆನ್ಸಿಲ್‌ಗಳನ್ನು ಕೊಡುತ್ತೇನೆ. ನಿನಗಿಷ್ಟ ಬಂದ ರೀತಿಯಲ್ಲಿ ಚಿತ್ರ ಬಿಡಿಸು' ಎಂದಾಗ ಆತ ಚಿತ್ರ ಬಿಡಿಸಲು ಒಪ್ಪಿಕೊಂಡ. ಚಿತ್ರದಲ್ಲಿ ಕೊಟ್ಟಿರುವ ಚಿತ್ರವನ್ನೂ ಬಿಡಿಸಿದ. 'ಎಷ್ಟು ಚೆನ್ನಾಗಿದೆ. ಭೇಷ್' ಎಂದು ವೈದ್ಯರು ಪ್ರಶಂಸಿದಾಗ ನಾಚಿಕೊಂಡೇ ಸಂತೋಷಪಟ್ಟ.

'ಈ ಚಿತ್ರದಲ್ಲಿ ಯಾರಿದ್ದಾರೆ..... ಇವನು ಯಾರು?'

‘ಇವನು ಕಿರಣ.... ನಾನೇ....’

‘ನೀನಾ.... ನೀನು ಏನು ಮಾಡುತ್ತಿದ್ದೀಯಾ?’

‘ನಿಂತುಕೊಂಡು ಅಳ್ತಾಇದ್ದೀನಿ’.

‘ಅಯ್ಯೋ ಪಾಪ. ಕಿರಣನಿಗೆ ಅಳುವಂತಾದ್ದು ಏನಾಯ್ತು?’

‘.....................’

‘ಹೋಗಲಿ, ಇದೇನಿದು?’

‘ಇದು ಕಾರು’

‘ಯಾರ ಕಾರು’

‘ಚಿಕ್ಕಪ್ಪನ ಕಾರು’

‘ಕಾರಿನಲ್ಲಿ ಚಿಕ್ಕಪ್ಪ ಇದ್ದಾರಾ?’

‘ಇದ್ದಾರೆ. ಅವರು ಯಾವಾಗಲೂ ಕಾರಿನಲ್ಲೇ ಓಡಾಡುತ್ತಾರೆ’.

‘ಹೌದು. ಅವರು ನಿನಗೆ ಇಷ್ಟವಾ?

‘ತುಂಬಾ ಇಷ್ಟ. ದೊಡ್ಡವನಾದ ಮೇಲೆ ನಾನೂ ಅವರ ಹಾಗೇ ಕಾರಿನಲ್ಲಿ ಓಡಾಡುತ್ತೇನೆ’.

‘ವೆರಿಗುಡ್, ಜಾಣ ನೀನು. ಕಾರಿನಲ್ಲಿರುವ ಚಿಕ್ಕಪ್ಪ ಎಲ್ಲಿಗೆ ಹೋಗ್ತಾರೆ?’

‘ಬೊಂಬಾಯಿಗೆ..... ನೋಡಿ.... ಇದೇ ಬೊಂಬಾಯಿ. ಅಲ್ಲಿ ಬರೀ ಮಹಡಿ ಮನೆಗಳೇ.’

‘ಹೌದಾ. ನೀನು ಬೊಂಬಾಯಿ ನೋಡಿದ್ದೀಯಾ’

‘ಇಲ್ಲ’

‘ನೋಡಬೇಕೂ ಅಂತ ಆಸೇನಾ’

‘ಹೂಂ. ನಾನು ಬೊಂಬಾಯಿಗೆ ಹೋಗಬೇಕು ಅಲ್ಲೇ ಇರಬೇಕು.’

‘ನಿಮ್ಮ ಅಪ್ಪನ್ನ ಕೇಳು. ಕರಕೊಂಡು ಹೋಗ್ತಾರೆ.’

‘ಕರಕೊಂಡು ಹೋಗೋಲ್ಲ’.

‘ಹೌದಾ. ಹಾಗಂತ ಹೇಳಿದ್ದಾರಾ?’

‘ಹೇಳಿಲ್ಲ. ಆದರೆ ಅವರು ಕರ್‍ಕೊಂಡು ಹೋಗೊಲ್ಲ ಅದು ನನಗೆ ಗೊತ್ತು’.

‘ಅದು ಹೇಗೆ ಗೊತ್ತು?’

‘ಅಪ್ಪಾನೂ, ಚಿಕ್ಕಪ್ಪಾನೂ ಜಗಳ ಆಡಿದ್ರು. ಅಪ್ಪ ಚಿಕ್ಕಪ್ಪನ್ನ ಚೆನ್ನಾಗಿ ಬೈದರು. ಚಿಕ್ಕಪ್ಪ ಇನ್ನು ನಮ್ಮ ಮನೆಗೆ ಬರೋಲ್ಲ. ನಾವು ಅವರ ಮನೆಗೆ ಹೊಗೋಹಾಗಿಲ್ಲ.’

‘ತುಂಬಾ ಬೇಜಾರಾಗಿರಬೇಕಲ್ಲಾ ನಿನಗೆ?

'ಹೌದು. ತುಂಬಾ ಬೇಜಾರು. ಏನು ಮಾಡೋದಿಕ್ಕೂ ಆಸೆ ಇಲ್ಲ. ಸುಮ್ನೆ ಕೂತಿರೋಣ ಅನ್ನಿಸತ್ತೆ.... ಅಪ್ಪನ ಮೇಲೆ ಕೋಪ ಬಂದಿದೆ. ಅಪ್ಪ ಕೆಟ್ಟವರು... ರೀ. ನಾನು ಹೀಗೆ ಹೇಳಿದೆ ಅಂತ ನಮ್ಮಪ್ಪನಿಗೆ ಹೇಳಬೇಡಿ.'

'ಇಲ್ಲ ಕಿರಣ್ ನಾನು ಹೇಳೋಲ್ಲ. ಚಿಕ್ಕಪ್ಪನ ಹತ್ತಿರ ಹೋಗೋದಿಕ್ಕೆ ನಿನಗೆ ಇಷ್ಟವಾ?

'ಹೌದು. ನೀವು ನಮ್ಮ ತಂದೆಗೆ ಹೇಳಿ. ನನ್ನನ್ನು ಬೊಂಬಾಯಿಗೆ ಕಳುಹಿಸುತ್ತೀರಾ. ಒಂದು ವಾರ ಇದ್ದು ಬಂದು ಬಿಡ್ತೀನಿ.'

'ಆಯ್ತು ಹಾಗೇ ಮಾಡೋವಂತೆ. ಈಗ ನೀನು ಸ್ಕೂಲಿಗೆ ಹೋಗಬೇಕು. ಮೊದಲಿನ ಹಾಗೇ ಇರಬೇಕು. ದಸರಾ ರಜೆಯಲ್ಲಿ ನಿನ್ನನ್ನು ಬೊಂಬಾಯಿಗೆ ಕರೆದುಕೊಂಡು ಹೋಗೋ ಹಾಗೇ ನಿಮ್ಮ ತಂದೆಗೆ ನಾನು ಶಿಫಾರಸ್ ಮಾಡ್ತೀನಿ ಆಯ್ತಾ.

'ರೀ ನೀವು ತುಂಬಾ ಒಳ್ಳೆಯವರು' ಎಂದು ಕೇಕೆ ಹಾಕಿ ನಕ್ಕ. ಕರಿಮೋಡದಂತೆ ಕವಿದಿದ್ದ ಅವನ 'ಖಿನ್ನತೆ' ಒಡಿಹೋಗಿತ್ತು. ಮಕ್ಕಳ ಮನಸ್ಸನ್ನು ಅರ್ಥಮಾಡಿಕೊಳ್ಳಲು ಹಲವಾರು ಚಿತ್ರ ಪರೀಕ್ಷೆಗಳಿವೆ.

### ಸೆಗ್ವಿನ್ ಫಾರ್ಮ್ ಬೋರ್ಡ್

ಮಕ್ಕಳ ಮಾನಸಿಕ ಬೆಳವಣಿಗೆಯನ್ನು ತಿಳಿಯಲು ಬಳಸುವ ಇನ್ನೊಂದು ವಿಧಾನ 'ಸೆಗ್ವಿನ್ ಫಾರ್ಮ್ ಬೋರ್ಡ್. ಮರದಲ್ಲಿ ಮಾಡಿದ ವಿವಿಧ ಆಕಾರಗಳು ಮತ್ತು ಆ ಆಕಾರಕ್ಕೆ ತಕ್ಕಂತೆ ಮಾಡಿದ ಕುಳಿಗಳಿರುವ ಹಲಗೆ ಈ ಪರೀಕ್ಷೆಯ ಸಲಕರಣೆಗಳು. ವಿವಿಧ ಆಕೃತಿಗಳನ್ನು ಮೂರು ಗುಂಪಾಗಿ ಒಂದರ ಮೇಲೊಂದರಂತೆ ಪೇರಿಸಿ ಇಡಲಾಗುತ್ತದೆ. ಒಂದೊಂದು ಆಕೃತಿಯನ್ನು ಕೈಯಲ್ಲಿ ತೆಗೆದುಕೊಂಡು, ಆ ಆಕೃತಿಗೆ ಸರಿಹೊಂದುವಂತಹ ಕುಳಿಯಲ್ಲಿಡಲು ಮಗುವಿಗೆ ಹೇಳಲಾಗುತ್ತದೆ. ಇದನ್ನು ಆದಷ್ಟು ಬೇಗ ಮಾಡಲು ಹೇಳಲಾಗುತ್ತದೆ. ಎಲ್ಲಾ ಆಕೃತಿಗಳನ್ನು ಆಯಾ ಕುಳಿಗಳಲ್ಲಿಡಲು ಮಗು ಎಷ್ಟು ಸಮಯ ತೆಗೆದುಕೊಳ್ಳುತ್ತದೆ ಹಾಗೂ ಎಷ್ಟು ತಪ್ಪು ಮಾಡುತ್ತದೆ ಎಂಬುದನ್ನು ಆಧರಿಸಿ, ಮಗುವಿನ ಮಾನಸಿಕ ವಯಸ್ಸನ್ನು ನಿರ್ಧರಿಸಲಾಗುತ್ತದೆ.

### ಮನೆ-ಮರ-ಮನುಷ್ಯ ಪರೀಕ್ಷೆ (House Tree Person Test)

1948ರಲ್ಲಿ ಬಕ್ ಎನ್ನುವ ಮನಶಾಸ್ತ್ರಜ್ಞ ರೂಪಿಸಿದ ಈ ಪರೀಕ್ಷಾ ವಿಧಾನದಲ್ಲಿ, ಮನೆ-ಮರ-ಮನುಷ್ಯನ ಚಿತ್ರವಿದ್ದು, ಅದನ್ನು ಆಧಾರವಿಟ್ಟುಕೊಂಡು ಮಗುವಿನ ಸಂದರ್ಶನ ಮಾಡಲಾಗುವುದು.

### ನಿರಾಶೆಯ ಚಿತ್ರಗಳ ಪರೀಕ್ಷೆ (Picture frustration test)

ರೊಸೆನ್ಜ್‌ವರ್ಗ್ ರೂಪಿಸಿದ ಈ ಪರೀಕ್ಷೆಯಲ್ಲಿ 24 ಕಾರ್ಟೂನು ಚಿತ್ರಗಳಿರುತ್ತವೆ.

ಪ್ರತಿ ಚಿತ್ರದಲ್ಲೂ ಇಬ್ಬರು ವ್ಯಕ್ತಿಗಳಿರುತ್ತಾರೆ. ಒಬ್ಬ ಇನ್ನೊಬ್ಬನಿಗೆ ನಿರಾಶೆ-ಹತಾಶೆಯನ್ನುಂಟು ಮಾಡುವ ಮಾತುಗಳನ್ನಾಡುತ್ತಿರುತ್ತಾನೆ. ಹತಾಶೆಯ ಮಾತುಗಳು ಮುದ್ರಿತವಾಗಿರುತ್ತವೆ. ಅದಕ್ಕೆ ಪ್ರತಿಯಾಗಿ, ಉತ್ತರ/ಪ್ರತಿಕ್ರಿಯೆ ಮಾತುಗಳನ್ನು ಮುದ್ರಿಸುವುದಿಲ್ಲ. ಆ ಉತ್ತರ/ಪ್ರತಿಕ್ರಿಯಾ ಮಾತುಗಳನ್ನು ಮಗು ಕೊಡಬೇಕಾಗುತ್ತದೆ. ಆ ಉತ್ತರಗಳ ಸ್ವರೂಪದ ವಿಶ್ಲೇಷಣೆಯಿಂದ ಮಗುವಿನ ಮಾನಸಿಕ ಬೆಳವಣಿಗೆಯನ್ನು, ಪ್ರೌಢಿಮೆಯನ್ನು ಅಳೆಯಬಹುದು.

**ಚಿತ್ರಕಥೆಯನ್ನು ಹೇಳುವ ಪರೀಕ್ಷೆ (Make a picture story test)**

1947ರಲ್ಲಿ ಶ್ನೈಡ್‌ಮನ್ ಎನ್ನುವಾತ ಸಿದ್ಧಪಡಿಸಿದ ಈ ಪರೀಕ್ಷೆಯಲ್ಲಿ 22 ಹಿನ್ನೆಲೆ ಚಿತ್ರಗಳಿರುತ್ತವೆ. ಸ್ಕೂಲು, ತರಗತಿಯ ದೃಶ್ಯ, ಮನೆ, ಬೀದಿ, ಮಾರುಕಟ್ಟೆ, ಆಟದ ಬಯಲು, ಕಾಡು, ನದಿ, ಬೆಟ್ಟ, ಮಲಗುವ ಮನೆ, ಅಡುಗೆ ಮನೆ ಇತ್ಯಾದಿ. ಹಾಗೂ 67 ಮನುಷ್ಯರ, ಇತರ ವಸ್ತುಗಳ ಚಿತ್ರಗಳೂ ಇರುತ್ತವೆ. ಇವನ್ನು ಬಳಸಿಕೊಂಡು ಮಗು, ಕಥೆಯೊಂದನ್ನು ಹೇಳಬೇಕು. ತನ್ಮೂಲಕ ಮಗುವಿನ ಮಾನಸಿಕ ಬೆಳವಣಿಗೆ - ಸಮಸ್ಯೆಗಳ ಪರಿಚಯ ನಮಗಾಗುತ್ತದೆ.

**ಬೆರಳಿನಿಂದ ಚಿತ್ರ ಬಿಡಿಸುವುದು (Finger Painting)**

ಬೆರಳನ್ನು ಬಣ್ಣದಲ್ಲಿ ಅದ್ದಿ, ತನಗಿಷ್ಟ ಬಂದಂತೆ ಚಿತ್ರ ಬಿಡಿಸಲು ಮಗುವಿಗೆ ಹೇಳಿ. ಬರೆದದ್ದರ ಬಗ್ಗೆ ವಿವರಕೊಡುವಂತೆ ಕೇಳುವುದು ಯಾವ ಬಣ್ಣ ಏನು ಬರೆದಿದೆ ಎಂದು ಗಮನಿಸುವುದು ಈ ಪರೀಕ್ಷಾ ವಿಧಾನದ ತಿರುಳು.

**ನಾಲ್ಕು ಚಿತ್ರಗಳ ಪರೀಕ್ಷೆ (Four Picture Test)**

1948ರಲ್ಲಿ ವಾನ್ ಲೆನ್ನಪ್ ಎನ್ನುವಾತ ರಚಿಸಿದ ಈ ಪರೀಕ್ಷೆಯಲ್ಲಿ ನಾಲ್ಕು ಚಿತ್ರಗಳಿರುತ್ತವೆ. ಒಂದರಲ್ಲಿ ಒಬ್ಬ ವ್ಯಕ್ತಿ ಒಂಟಿಯಾಗಿದ್ದರೆ, ಇನ್ನೊಂದರಲ್ಲಿ ಮತ್ತೊಬ್ಬ ವ್ಯಕ್ತಿಯೊಂದಿಗಿರುತ್ತಾನೆ. ಮೂರನೇ ಚಿತ್ರದಲ್ಲಿ, ಸಾಮಾಜಿಕ ಸನ್ನಿವೇಶದಲ್ಲಿ ವ್ಯಕ್ತಿ ಒಂಟಿಯಾಗಿರುತ್ತಾನೆ. ನಾಲ್ಕನೇ ಚಿತ್ರದಲ್ಲಿ ಎಲ್ಲರೊಂದಿಗೆ ವ್ಯಕ್ತಿ ಇರುತ್ತಾನೆ. ಒಂದೊಂದು ಚಿತ್ರವನ್ನು ನೋಡಿ, ಮಗು ಒಂದು ಕಥೆ ಹೇಳಬೇಕಾಗುತ್ತದೆ. ಕಥೆಯ ಹಂದರ ಮತ್ತು ಹೂರಣವನ್ನು ವಿಶ್ಲೇಷಿಸಿ, ಮಗುವಿನ ಮನಸ್ಸನ್ನು ಅರಿಯಲಾಗುವುದು.

**ರಿಟೆಂಟಿವಿಟಿ ಟೆಸ್ಟ್**

ಕಣ್ಣಿನ ಮೂಲಕ ನೋಡಿದ ಚಿತ್ರಗಳ ನೆನಪು ಎಷ್ಟು ಉಳಿಯುವುದು ಎಂಬುದನ್ನು ಪರೀಕ್ಷಿಸಲು 'ರಿಟೆಂಟಿವಿಟಿ ಟೆಸ್ಟ್' ಅನ್ನು ಬಳಸಲಾಗುವುದು. 30 ಸೆಕೆಂಡುಗಳ ಕಾಲ ಚಿತ್ರದಲ್ಲಿರುವ ವಸ್ತುಗಳನ್ನು ನೋಡಿದ ಮೇಲೆ ವ್ಯಕ್ತಿ ನೆನಪಿನಿಂದ ಆ ವಸ್ತುಗಳನ್ನೆಲ್ಲಾ ಹೆಸರಿಸಬೇಕು. ಇದು ತಕ್ಷಣದ ನೆನಪಿನ (Immediate memory) ಪರೀಕ್ಷೆಯೂ ಹೌದು.

## ಚಿತ್ರಗಳ ಮೂಲಕ ಕಲಿಕೆ

ಭಾಷೆಯ ಮುಖಾಂತರಕ್ಕಿಂತ, ಚಿತ್ರಗಳ ಮೂಲಕ ಕಲಿಕೆ ಸುಲಭ ಮತ್ತು ಪರಿಣಾಮಕಾರಿ. ನೂರಾರು ಪದಗಳು ಹೇಳುವುದನ್ನು, ಒಂದು ಚಿತ್ರ ಹೇಳಬಲ್ಲದು. ನೂರಾರು ಪದಗಳು ಕೊಡುವ ಮಾಹಿತಿಗಿಂತ, ಹೆಚ್ಚಿನ ಮಾಹಿತಿಯನ್ನು ಒಂದು ಚಿತ್ರ ಕೊಡಬಲ್ಲದು. ಹೀಗಾಗಿ, ಮಕ್ಕಳ ಶಿಕ್ಷಣದಲ್ಲಿ ಚಿತ್ರಕಲೆ ಪ್ರಮುಖ ಪಾತ್ರವಹಿಸುವಂತಾಗಬೇಕು. ಪ್ರೈಮರಿ, ಮಾಧ್ಯಮಿಕ ಶಾಲೆಯ ಪಠ್ಯಪುಸ್ತಕಗಳು ಹೆಚ್ಚು ಚಿತ್ರಮಯವಾಗಿರಬೇಕು. ಹಾಗೆಂದು ಕಾಟಾಚಾರಕ್ಕೆ ಕಳಪೆ ಚಿತ್ರಗಳನ್ನು ಹಾಕುವುದು ಸಲ್ಲದು. ವಾಸ್ತವಿಕವಾದ, ಸುಂದರವಾದ, ಬಣ್ಣದ ಚಿತ್ರಗಳು ಹೆಚ್ಚು ಸಮಂಜಸ. ಅವು ಮಕ್ಕಳನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತವೆ. ಆದ್ದರಿಂದಲೇ ಇಂದು 'ಕಾಮಿಕ್ಸ್ ಪುಸ್ತಕಗಳು' ಮಕ್ಕಳಿಗೆ ಬಲು ಅಚ್ಚುಮೆಚ್ಚು. ಚಿತ್ರಗಳನ್ನು ನೋಡುತ್ತಾ, ಕಥೆಯನ್ನು ತಿಳಿದುಕೊಳ್ಳುವುದೂ, ಪಾತ್ರಗಳನ್ನು ಅರ್ಥಮಾಡಿ ಕೊಳ್ಳುವುದು, ಜ್ಞಾನಾರ್ಜನೆ ಮಾಡುವುದು ಮಕ್ಕಳಿಗೆ ಸುಲಭವಾಗುತ್ತದೆ. ಕಲಿಕೆ ಕಣ್ಣೀರಿನ ಕ್ರಿಯೆ ಆಗದೇ, ಖುಷಿಯ ಕ್ರಿಯೆಯಾಗುತ್ತದೆ.

ಹಾಗೇ ಮಕ್ಕಳು ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ಚಿತ್ರ ರಚನೆಯ ಮೂಲಕ ಪರಿಣಾಮಕಾರಿಯಾಗಿ ಮಾಡಬಲ್ಲರು. ಶಾಲೆಗಳಲ್ಲಿ 'ಡ್ರಾಯಿಂಗ್' ಕೇವಲ ಒಂದು ಶಾಸ್ತ್ರವಾಗಬಾರದು. ಮುಕ್ತವಾಗಿ ತಮಗಿಷ್ಟ ಬಂದ ರೀತಿಯಲ್ಲಿ ತಮ್ಮ ಭಾವನೆಗಳನ್ನು ಅಭಿವ್ಯಕ್ತಿ ಪಡಿಸಲು ಮಕ್ಕಳಿಗೆ ಅವಕಾಶವಿರಬೇಕು. ಎಷ್ಟು ಬೇಕೋ ಅಷ್ಟು ಮಾರ್ಗದರ್ಶನ, ಪ್ರೋತ್ಸಾಹ ಶಿಕ್ಷಕರಿಂದ, ಪೋಷಕರಿಂದ ಸಿಗುವಂತಾಗಬೇಕು. ಭಾಷೆಯನ್ನು ಕಲಿಯಲು ನಾವು ಎಷ್ಟು ಮಹತ್ವವನ್ನು ಕೊಡುತ್ತೇವೆಯೋ ಅಷ್ಟೇ ಮಹತ್ವವನ್ನು ಚಿತ್ರಕಲೆಯನ್ನು ಕಲಿಯಲು ಕೊಡಬೇಕು. ಶಿಕ್ಷಕರು, ಶಿಕ್ಷಣ ತಜ್ಞರು ಇತ್ತ ಗಮನಹರಿಸಬೇಕು.

## ವ್ಯಕ್ತಿತ್ವವನ್ನು ಅರಿಯಲು ಚಿತ್ರಗಳು

ಮನೋವಿಕಾಸವಾಗಿ, ಪ್ರತಿಯೊಬ್ಬ ವ್ಯಕ್ತಿ ತನ್ನದೇ ಆದ, ತನಗೇ ವಿಶಿಷ್ಟವಾದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುತ್ತಾನೆ. ಈ ವ್ಯಕ್ತಿತ್ವದ ಪ್ರಭಾವದಿಂದ, ತನ್ನ ಜೀವನ ಶೈಲಿಯನ್ನು ಇತರರೊಡನೆ ಸ್ನೇಹ, ಸಂಬಂಧ, ದ್ವೇಷ, ಜಗಳಗಳನ್ನು ಯಾವುದೇ ಪ್ರಚೋದನೆಗೆ ಎಂತಹ ಪ್ರತಿಕ್ರಿಯೆ ತೋರಿಸಬೇಕೆಂಬುದನ್ನು ರೂಪಿಸಿಕೊಳ್ಳುತ್ತಾನೆ. ಯಾವ ಬಗೆಯ ವ್ಯಕ್ತಿತ್ವದಿಂದ ವ್ಯಕ್ತಿ ತಾನೂ ನೆಮ್ಮದಿಯಿಂದ ಬದುಕುವುದಲ್ಲದೆ, ಇತರರನ್ನೂ ನೆಮ್ಮದಿಯಿಂದ ಬದುಕಲು ಬಿಡುತ್ತಾನೋ, ಆ ವ್ಯಕ್ತಿತ್ವ ಪ್ರೌಢ, ಆರೋಗ್ಯಕರ ಎನಿಸಿಕೊಳ್ಳುತ್ತದೆ. ಯಾವ ಬಗೆಯ ವ್ಯಕ್ತಿತ್ವದಿಂದ ವ್ಯಕ್ತಿ ತಾನೂ ಕಷ್ಟ, ನಷ್ಟ, ನೋವುಗಳನ್ನುಂಡು ಇತರರಿಗೂ ಅವುಗಳನ್ನು ಉಣಬಡಿಸುತ್ತಾನೋ, ಆ ವ್ಯಕ್ತಿತ್ವಗಳು, ದೋಷಪೂರ್ಣ ವ್ಯಕ್ತಿತ್ವಗಳು ಎನಿಸಿಕೊಳ್ಳುತ್ತವೆ. (Personality Disorders).

**1. ಸ್ಕಿಜಾಯಿಡ್ ವ್ಯಕ್ತಿತ್ವ:** ಒಂಟಿ ಜೀವನ, ಮಾತಿಗಿಂತ ಮೌನವೇ ಪ್ರಿಯ. ಒಬ್ಬಿಬ್ಬರೊಡನೆ ಮಾತ್ರ ಆಳವಾದ ಸಂಬಂಧ. ವ್ಯಕ್ತಿ ಎಲ್ಲರಿಗೆ 'ಮುಚ್ಚಿದ ಪುಸ್ತಕ'ದಂತೆ ಒಗಟಾಗುತ್ತಾನೆ. ಕಷ್ಟಜೀವಿ, ಹೆಚ್ಚು ಸೃಜನ ಶೀಲ.

**2. ಸೈಕ್ಲೋಥೈಮಿಕ್ ವ್ಯಕ್ತಿತ್ವ:** ಒಂದು ಅವಧಿಯಲ್ಲಿ ಪಾದರಸದಂತೆ ಚುರುಕು, ಉತ್ಸಾಹದ ಚಿಲುಮೆ. ಮತ್ತೊಂದು ಅವಧಿಯಲ್ಲಿ ನಿರುತ್ಸಾಹ ನಿರಾಶವಾದ ಮಂಕು.

**3. 'ಗೀಳು' ವ್ಯಕ್ತಿತ್ವ:** ಅತಿ ಅಚ್ಚುಕಟ್ಟುತನ. ಬಿಗಿಹಿಡಿತ, ಶಿಸ್ತು, ವಿಪರೀತ ಅಹಂ. ಇತರರೊಡನೆ ತಾತ್ವಿಕ ಘರ್ಷಣೆ, ಮೌಲ್ಯಗಳ ಬಗ್ಗೆ ಮೋಹ.

**4. ಆಕ್ರಮಣಕಾರಿ ವ್ಯಕ್ತಿತ್ವ:** ಸ್ವಲ್ಪಕ್ಕೇ ಸಿಡಿದೇಳುವ, ಸದಾ ಸಿಡಿಗುಟ್ಟುವ, ಅವಕಾಶ ಸಿಕ್ಕರೆ ಸಾಕು ಮೈಮೇಲೆಏರಿ ಹೋಗುವ, ಅಸಹನೆ, ಹಿಂಸೆಯ ಪ್ರವೃತ್ತಿ.

**5. ಅಪರೋಕ್ಷ ಆಕ್ರಮಣಕಾರಿ ವ್ಯಕ್ತಿತ್ವ:** ನೇರವಾಗಿ ಪ್ರತಿಭಟಿಸದೆ ಒಳಗಿಂದೊಳಗೇ ಬತ್ತಿ ಇಡುವ, ವಿಘ್ನ ಸಂತೋಷಿ. ಆಗುವ ಕೆಲಸಕ್ಕೆ ಅಡ್ಡಗಾಲು ಹಾಕುವ ಪ್ರವೃತ್ತಿ.

**6. ಉನ್ಮಾದ ವ್ಯಕ್ತಿತ್ವ:** ಅಪಕ್ವತೆ, ಸುಲಭಕ್ಕೆ ಭಾವೋದ್ರೇಕಕ್ಕೆ ಒಳಗಾಗುವುದು, ಅದನ್ನು ನಾಟಕೀಯವಾಗಿ ಎಲ್ಲರೆದುರು ಪ್ರದರ್ಶಿಸಿ ಎಲ್ಲರ ಗಮನ ಸೆಳೆಯುವುದು, ಹಠಮಾರಿತನ, ಆಡಂಬರದ ಅಲಂಕಾರ, ಸ್ವೇಚ್ಛೆಯಾಗಿ ನಡೆದುಕೊಳ್ಳುವುದು, ಪರಾವಲಂಬಿತನ.

**7. ಅವಲಂಬಿತ ವ್ಯಕ್ತಿತ್ವ:** ಎಲ್ಲದಕ್ಕೂ ಇತರರನ್ನು ಅವಲಂಬಿಸುವುದು.

**8. ಅವಾಯ್ಡೆಂಟ್ ವ್ಯಕ್ತಿತ್ವ:** ಜನರೊಡನೆ ಬೆರೆಯ ಬೇಕಾದಾಗ ಆತಂಕಕ್ಕೀಡಾಗುವುದೂ, ಸಭೆ ಸಮಾರಂಭಗಳಲ್ಲಿ ಭಾಗವಹಿಸಲು ಹಿಂಜರಿಯುವುದು, ನಾಚಿಕೆ, ಭಯ.

**9. ಸಂಶಯ ಪೀಡಿತ ವ್ಯಕ್ತಿತ್ವ :** ಯಾರ ಮೇಲೂ ವಿಶ್ವಾಸವಿಲ್ಲ. ಎಲ್ಲರಲ್ಲೂ ಎಲ್ಲ ಸನ್ನಿವೇಶದಲ್ಲೂ ಅಪನಂಬಿಕೆ. ತನ್ನ ಕೆಲಸಗಳಲ್ಲಿ ಇತರರು ತಪ್ಪು ಕಂಡು ಹಿಡಿಯುವರೆಂಬ ಭಯ, ಸದಾ ಸ್ವರಕ್ಷಣೆಗಾಗಿ ಪ್ರಯತ್ನ.

**10. ಸಮಾಜ ವಿರೋಧಿ ವ್ಯಕ್ತಿತ್ವ:** ತನ್ನ ಸ್ವಾರ್ಥ ಸಾಧನೆಗಾಗಿ ತಾನು ಖುಷಿಪಡಲು, ಕಳ್ಳತನ, ಸುಳ್ಳು, ವಂಚನೆ, ಮೋಸ, ಹಿಂಸಾಚಾರ ಮಾಡಲು ಹೇಸದವನು. ತಪ್ಪು ಮಾಡಿ ಅದನ್ನು ಸಮರ್ಥಿಸಿಕೊಳ್ಳುವವನು, ಶಿಕ್ಷೆಯಿಂದ ಬದಲಾಗದವನು.

ಹೀಗೆ ಅನೇಕ ವಿಧದ ವ್ಯಕ್ತಿತ್ವಗಳಿವೆ. ಇವುಗಳನ್ನು ಗುರುತಿಸಲು ಚಿತ್ರಕಲೆ ನಮಗೆ ನೆರವಾಗುತ್ತದೆ. 'ಪ್ರೊಜೆಕ್ಟಿವ್ ಟೆಸ್ಟ್'ಗಳೆಂದು ಪ್ರಸಿದ್ಧವಾಗಿರುವ ಈ ಕೆಳ ಕಾಣುವ ಚಿತ್ರ ಪರೀಕ್ಷೆಗಳು ಗಮನಾರ್ಹ.

**1. ರೋರ್ಶಾಕ್ ಪರೀಕ್ಷೆ** ಅಥವಾ ಮಸಿ ಚಿತ್ರಗಳ ಪರೀಕ್ಷೆ: ಸ್ವಿಟ್ಜರ್‌ಲ್ಯಾಂಡಿನ ಮನೋವೈದ್ಯ ಹೆರ್ಮನ್ ರೋರ್ಶಾಕ್ ರೂಪಿಸಿರುವ ಮಸಿ ಚಿತ್ರಗಳು 1911ರಿಂದ ಬಳಕೆಯಲ್ಲಿವೆ. ಯಾವುದೇ ಸ್ಪಷ್ಟ ಚಿತ್ರಗಳಿಲ್ಲದ, ಆಕಾರ ರಹಿತ 10 ಮಸಿ ಚಿತ್ರಗಳೇ ಈ ಪರೀಕ್ಷೆಯ ಪರಿಕರಗಳು. ಪ್ರತಿಯೊಂದು ಚಿತ್ರವನ್ನು ವ್ಯಕ್ತಿಗೆ ಕೊಟ್ಟು 'ನೋಡು ಈ ಚಿತ್ರವನ್ನು ನೋಡಿದಾಗ, ನಿನ್ನ ಮನಸ್ಸಿಗೆ ಅದರಲ್ಲಿ ಏನಿರಬಹುದು ಎಂದು ಅನಿಸುತ್ತದೋ ಅದನ್ನು ಹೇಳುತ್ತಾ ಹೋಗು. ಅದೇನಿರಬಹುದೆಂದು ನಿನಗೆ ಅನಿಸಲು ವಿವರಗಳನ್ನೂ

ಹೇಳುತ್ತಾ ಹೋಗು ಎಂದು ಹೇಳಲಾಗುತ್ತದೆ. ವ್ಯಕ್ತಿ ಅದರಲ್ಲಿ ಕುಣಿಯುತ್ತಿರುವ ಬಫೂನ್‌ಗಳನ್ನು ಕಂಡರೆ, ಬಫೂನ್‌ಗಳ ತಲೆ, ಕೈ ಕಾಲುಗಳು ಎಲ್ಲಿವೆ ಹಾರುವ ಹಕ್ಕಿ ಕಂಡರೆ, ಹಕ್ಕಿಯ ತಲೆ ಎಲ್ಲಿ, ರೆಕ್ಕೆ ಎಲ್ಲಿ ಇತ್ಯಾದಿ ವಿವರಗಳನ್ನು ಕೊಡಬೇಕು. ಚಿತ್ರದ ಮೂರನೇ ಕಾರ್ಡ್ ಅನ್ನು ನೋಡಿದ ವ್ಯಕ್ತಿ ಹೀಗೆ ಹೇಳಿದ:

'ಇಲ್ಲಿ ಇಬ್ಬರು ಬತ್ತಲೆ ನಿಂತಿದ್ದಾರೆ. ಅವರ ಜನನಾಂಗಗಳು ಕಾಣುತ್ತಿವೆ. ಅವರು ಹೋರಾಡುತ್ತಿದ್ದಾರೆ. ರಕ್ತ ಎಲ್ಲೆಡೆ ಚೆಲ್ಲಾಡಿದೆ. ಅವರ ಕೈಗಳಲ್ಲಿ ಚಾಕುಗಳಿವೆ. ಪರಸ್ಪರ ಹೊಡೆದುಕೊಂಡು ಅವರ ಅಂಗಾಂಗಳು ಹೊರಬಂದಿವೆ. ಎರಡು ಹದ್ದುಗಳು ಅವುಗಳನ್ನು ತಿನ್ನಲು ಕಾದು ಕೂತಿವೆ.

ಈ ಪ್ರತಿಕ್ರಿಯೆ ಮತ್ತು ಇನ್ನಿತರ ವಿವರಗಳಿಂದ ಈ ವ್ಯಕ್ತಿ 'ಸಮಾಜ ವಿರೋಧಿ ವ್ಯಕ್ತಿತ್ವ' ಉಳ್ಳವನು ಎಂದು ತೀರ್ಮಾನಕ್ಕೆ ಬರಬಹುದು.

ಈ ರೋರ್ಶಾಕ್ ಪರೀಕ್ಷೆಯಿಂದ ವ್ಯಕ್ತಿ, ಸ್ಕಿಜೋಫ್ರೀನಿಯಾ' ಕಾಯಿಲೆಯಿಂದ ಅಥವಾ ಮೇನಿಯಾ, ಡಿಪ್ರೆಶನ್ ಕಾಯಿಲೆಯಿಂದ ಬಳಲುತ್ತಿರುವನೇ ಎಂಬುದಕ್ಕೂ ಪುರಾವೆಗಳು ಸಿಗುತ್ತವೆ.

**ಥಿಮಾಟಿಕ್ ಅಪರ್‌ಸೆಪ್ಷನ್ ಟೆಸ್ಟ್ (TAT)**

1935ರಲ್ಲಿ ಮಾರ್ಗನ್ ಮತ್ತು ಮರ್ರೆ ಎಂಬುವರು ರೂಪಿಸಿದ ಈ ಪರೀಕ್ಷೆಯಲ್ಲಿ, ವಿವಿಧ ಭಾವನೆಗಳನ್ನು ತೋರಿಸುವ ವ್ಯಕ್ತಿಗಳು, ವಿವಿಧ ಸನ್ನಿವೇಶಗಳಿರುವ, ಕಪ್ಪು ಬಿಳುಪು ಚಿತ್ರಗಳಿರುತ್ತವೆ. ಮಕ್ಕಳಿಗೆ ಪ್ರಾಣಿಗಳಿರುವ ಚಿತ್ರಗಳಿರುತ್ತವೆ. ಈ ಪ್ರತಿಯೊಂದು ಚಿತ್ರವನ್ನು ನೋಡಿ, ಆ ಚಿತ್ರದಲ್ಲಿರುವ ವ್ಯಕ್ತಿಗಳಿಗೆ ಸಂಬಂಧಿಸಿದಂತೆ. ಒಂದು ಕಥೆಯನ್ನು ಹೊಸೆದು, ವ್ಯಕ್ತಿ ಹೇಳಬೇಕಾಗುತ್ತದೆ. ಈ ರೀತಿ ಕಥೆಯನ್ನು ಹೊಸೆಯುವಾಗ ವ್ಯಕ್ತಿ ತನಗರಿವಿಲ್ಲದಂತೆಯೇ ತನ್ನ ಭಾವನೆಗಳನ್ನು, ತನ್ನ ಜೀವನದ ಅನುಭವಗಳನ್ನು ತನ್ನ ಸುತ್ತಲಿನ ಜನರೊಡನೆ ತನ್ನ ಸಂಬಂಧವನ್ನು ಈ ಕಥೆಗಳಲ್ಲಿ ಬೆರೆಸಿರುತ್ತಾನೆ. ಅದರ ವಿಶ್ಲೇಷಣೆಯಿಂದ, ವ್ಯಕ್ತಿಯ ವ್ಯಕ್ತಿತ್ವ, ಆತನ ಸಂಬಂಧಗಳು, ಭಾವನಾತ್ಮಕ ಸಮಸ್ಯೆಗಳ ವಿರಾಟ್‌ದರ್ಶನವಾಗುತ್ತದೆ.

**ಕಲಾ ಚಿಕಿತ್ಸೆ (Art Therapy)**

ಜನ ಸಂಖ್ಯೆಯ ಶೇಕಡಾ ಹತ್ತರಷ್ಟು ಮಂದಿ ಆತಂಕ, ಖಿನ್ನತೆ, ಮಾನಸಿಕ ಒತ್ತಡದಿಂದ ಬರುವ ಶಾರೀರಿಕ ರೋಗಲಕ್ಷಣಗಳಂತಹ, ಅಲ್ಪ ಮಟ್ಟದ ಮಾನಸಿಕ ಅಸ್ವಸ್ಥತೆಗಳಿಂದ ಬಳಲುತ್ತಾರೆ. ಬೇಸರ, ನಿರಾಸಕ್ತಿ ಅಸಹಾಯಕತೆ, ಏಕಾಗ್ರತೆಯ ಕೊರತೆ, ಮರೆವು, ಅಸ್ಪಷ್ಟ ಭಯ, ತಳಮಳ, ನಿದ್ರಾಹೀನತೆ, ಹಸಿವಿಲ್ಲದಿರುವಿಕೆ, ಲೈಂಗಿಕ ದುರ್ಬಲತೆ, ತಲೆನೋವು, ಎದೆ ನೋವು, ಸೊಂಟನೋವು, ಸುಸ್ತು, ಆಯಾಸ, ಕೀಳರಿಮೆ ಇವೆ ಈ ಮಾನಸಿಕ ಅಸ್ವಸ್ಥತೆಗಳ ಸಾಮಾನ್ಯ ಲಕ್ಷಣಗಳು. ಇವುಗಳಿಂದಾಗಿ ವ್ಯಕ್ತಿಯ ಕಾರ್ಯಕ್ಷಮತೆ ಕ್ಷೀಣಿಸುವುದಲ್ಲದೆ, ವ್ಯಕ್ತಿ ದೈಹಿಕವಾಗಿ, ಮಾನಸಿಕವಾಗಿ 'ಹಿಂಸೆ'

ಅನುಭವಿಸುತ್ತಾನೆ. ತನ್ನ ಆರೋಗ್ಯ ಚೆನ್ನಿಲ್ಲ, ತನ್ನ ಶಕ್ತಿ ಉಡುಗಿದೆ ಎಂದು ವೈದ್ಯರಲ್ಲಿಗೆ ಧಾವಿಸುತ್ತಾನೆ. ಶಕ್ತಿ ವರ್ಧಕ ಟಾನಿಕ್ ಔಷಧಿಕೊಡಿ ಎಂದು ಕೇಳುತ್ತಾನೆ. ತನಗೆ ರೋಗವೇನಿಲ್ಲ ಎಂದು ಖಚಿತಪಡಿಸಿಕೊಳ್ಳಲು ಅನಗತ್ಯವಾದ 'ವಿವಿಧ ಪರೀಕ್ಷೆಗಳಿಗೆ' ಮೈ ಒಡ್ಡುತ್ತಾನೆ. ಯಾರು ಏನು ಚಿಕಿತ್ಸೆ ಪರಿಹಾರ ಹೇಳಿದರೂ, ಹಣದ ಮುಖ ನೋಡದೆ, ಖರ್ಚು ಮಾಡಿ ಚಿಕಿತ್ಸೆ ಪಡೆಯುತ್ತಾನೆ. ಫಲಿತಾಂಶ ಶೂನ್ಯವಾದಾಗ, ನಿರಾಶನಾಗುತ್ತಾನೆ. ಈ ಖಿನ್ನತೆ-ಆತಂಕ-ಮಾನಸಿಕ ಜನ್ಯ ರೋಗಲಕ್ಷಣಗಳ ಚಿಕಿತ್ಸೆ ಇಂದಿಗೂ ಜನರಿಗೆ ಅಲಭ್ಯ. ಏಕೆಂದರೆ, ಸಾಮಾನ್ಯ ವೈದ್ಯರು ಶರೀರ ಕಾಯಿಲೆಗಳ ತಜ್ಞರು 'ಮನೋವಿಶ್ಲೇಷಣೆ ಮಾಡಲು ಹೋಗುವುದಿಲ್ಲ. ಮಾನಸಿಕ ಒತ್ತಡಗಳ ಉಗಮ ಮತ್ತು ಬೆಳವಣಿಗೆಯ ಅಂಶಗಳನ್ನು ಅರ್ಥಮಾಡಿಕೊಳ್ಳುವುದಿಲ್ಲ' 'ಚಿಂತೆ ಮಾಡಬೇಡಿ. ಧೈರ್ಯವಾಗಿರಿ. ಎಲ್ಲ ಸರಿಹೋಗುತ್ತದೆ' ಎಂದು ಹೇಳಿ ಸುಮ್ಮನಾಗುತ್ತಾರೆ.

ಖಿನ್ನತೆ, ಆತಂಕದಂತಹ ಅಲ್ಪಮಟ್ಟದ ಮಾನಸಿಕ ಕಾಯಿಲೆಗಳ ಉಪಟಳದ ನಿವಾರಣೆಯಲ್ಲಿ 'ಕಲೆ' ಪ್ರಮುಖ ಚಿಕಿತ್ಸಾ ವಿಧಾನವಾಗಬಲ್ಲದು. ವ್ಯಕ್ತಿಯ ಜಾಗೃತ ಮತ್ತು ಸುಪ್ತ ಮನಸ್ಸಿನಲ್ಲಿರುವ ಆಸೆ, ನಿರಾಶೆಗಳನ್ನು, ದ್ವಂದ್ವಗಳನ್ನು, ಅಹಿತ ಅನುಭವಗಳನ್ನು ಹೊರಗೆಳೆದು, ಅವುಗಳ ಜೊತೆಯಲ್ಲಿಯೇ ಇರುವ ಭಾವೋದ್ರೇಕಗಳು ಪ್ರಕಟವಾಗುವಂತೆ ಮಾಡಿದರೆ 'ಮನಸ್ಸಿಗೆ ಹಾಯೆನಿಸುತ್ತದೆ. ಖಿನ್ನತೆ-ಆತಂಕ ಮತ್ತು ಶಾರೀರಿಕ ನೋವುಗಳು ಕಡಿಮೆಯಾಗುತ್ತದೆ. ಇದನ್ನು Ventilation, Abreaction ಕ್ರಿಯೆ ಎನ್ನುತ್ತಾರೆ. ವ್ಯಕ್ತಿಗೆ ಪೆನ್ಸಿಲ್, ಬ್ರಶ್ ಕೊಟ್ಟು ತನಗಿಷ್ಟ ಬಂದ ರೀತಿಯಲ್ಲಿ ಚಿತ್ರ ಬರಿ ಎಂದು ಪ್ರೋತ್ಸಾಹಿಸುವುದು ಅಥವಾ ಈಗಾಗಲೇ ರಚಿತವಾಗಿರುವ ಚಿತ್ರಕಲಾಕೃತಿಗಳನ್ನು ನೋಡಲು ಕೊಡುವುದು ಚಿಕಿತ್ಸೆಯ ಒಂದು ಭಾಗವಾಗುತ್ತದೆ. ಚಿತ್ರ ರಚನೆ ಮಾಡುವಾಗ ಅಥವಾ ಚಿತ್ರ ವೀಕ್ಷಣೆ ಮಾಡುವಾಗ ವ್ಯಕ್ತಿಯ ಮನಸ್ಸಿನಲ್ಲಿರುವ 'ಅಹಿತ ವಿಚಾರ'ಗಳನ್ನು ಮತ್ತು ಅನುಭವಗಳನ್ನು ಅದು ಮೀಟುಗೋಲಿನಂತೆ ಬಡಿದೆಬ್ಬಿಸುತ್ತದೆ. ಭಾವನೆಗಳು ಹೊರಬರುತ್ತವೆ. ಉದಾಹರಣೆಗೆ ತಂದೆ ತಾಯಿಗಳು ಮಗುವಿಗೆ ಶಿಕ್ಷೆ ಕೊಡುತ್ತಿರುವ ಚಿತ್ರ ನೋಡಿದ ವ್ಯಕ್ತಿಗೆ, ತನ್ನ ಬಾಲ್ಯದ ಅಹಿತ ಅನುಭವಗಳೆಲ್ಲ ನೆನಪಿಗೆ ಬರಬಹುದು. ಸಾವಿನ ಚಿತ್ರವನ್ನು ನೋಡಿದ ವ್ಯಕ್ತಿಗೆ, ತನ್ನ ತಂದೆ/ತಾಯಿ ಅಥವಾ ಆತ್ಮೀಯನ ಸಾವಿನ ನೆನಪಿನ ಗಂಟು ಬಿಚ್ಚಿಕೊಳ್ಳಬಹುದು. ಆಗ ಚಿಕಿತ್ಸಕ, ಆ ವಿಷಯ ಸಂದರ್ಭಗಳನ್ನು ವಿವರಿಸಲು ಹೇಳಿದ್ದೇ ಆದರೆ, ಸಹಾನುಭೂತಿಯಿಂದ ಕೇಳಿದ್ದೇ ಆದರೆ, ವೆಂಟಿಲೇಶನ್, ಅಬ್‌ರಿಯಾಕ್ಷನ್ ಆಗಿ, ವ್ಯಕ್ತಿ ಸಮಾಧಾನ ಪಡುತ್ತಾನೆ. ಹೆಣ್ಣು ಗಂಡು 'ಲೈಂಗಿಕ ಸಂಬಂಧ'ದಲ್ಲಿರುವಂತೆ ಚಿತ್ರಿಸುವ ಚಿತ್ರವನ್ನು ಕಂಡ ವ್ಯಕ್ತಿಯು ತನ್ನ ಮನದಾಳದ ಮೂಲೆಯಲ್ಲಿ ಕುಳಿತು ತಪ್ಪಿತಸ್ಥ ಭಾವನೆಯನ್ನುಂಟು ಮಾಡುತ್ತಿರುವ 'ಹದಿ ಹರೆಯದ ಲೈಂಗಿಕ ಸಂಪರ್ಕದ ವಿವರಗಳನ್ನು ಕೊಡಲು ಪ್ರಚೋದಿಸಬಹುದು. ಆಗ, ವಿವಾಹ ಪೂರ್ವದಲ್ಲಿ ನಡೆದು ಹೋದ ಆ ಘಟನೆಯ ಬಗ್ಗೆ ಈಗ ಯಾವ ನಿಲುವು ಆರೋಗ್ಯಕರ ಎಂದು ತಿಳಿಯ ಹೇಳಲು ಚಿಕಿತ್ಸಕನಿಗೆ ಸಾಧ್ಯವಾಗುತ್ತದೆ. ಅನೇಕ ಭಯದ ಮೂಲಗಳು ಚಿತ್ರಕಲೆಯ ಮೂಲಕ ಹೊರಗೆ ಬಂದಾಗ, ಪರಿಹಾರ ಸೂಚಿಸುವುದು, ಚಿಕಿತ್ಸಕನಿಗೆ ಸಾಧ್ಯವಾಗುತ್ತದೆ.

ಚಿತ್ರರಚನೆ ಮಾಡುವಾಗ ವ್ಯಕ್ತಿ ಆಯ್ದುಕೊಳ್ಳುವ ವಸ್ತು, ಬಣ್ಣಗಳಿಂದ, ಆತ ಖಿನ್ನತೆಯಿಂದ ಬಳಲುತ್ತಿರುವನೇ, ಲೈಂಗಿಕ ಸಮಸ್ಯೆಯಿಂದ ಬಳಲುತ್ತಿರುವನೇ, ಸಂಶಯ ಪೀಡಿತನೇ, ಆತಂಕ ಪೀಡಿತನೇ ಎಂಬುದು ತಿಳಿದುಬರುತ್ತದೆ. ಕಪ್ಪು, ಬೂದಿ ಬಣ್ಣಗಳು ಖಿನ್ನತೆಯ ಸೂಚಕವಾದರೆ ದೊಡ್ಡ ಕಣ್ಣುಗಳು ಸಂಶಯ, ಭಯದ ಪ್ರತೀಕವಾಗುತ್ತವೆ.

**ಕಲೆಯಿಂದ ಮನೋವಿಕಾಸ, ಮಾನಸಿಕ ಆರೋಗ್ಯ**

ಮನಸ್ಸಿನ ಭಾವನೆಗಳ ಅಭಿವ್ಯಕ್ತಿಗೆ ಚಿತ್ರಕಲೆ ಒಂದು ಪ್ರಬಲವಾದ, ನೈಸರ್ಗಿಕವಾದ ಮಾಧ್ಯಮ ಎಂದು ತಿಳಿದಿರಿ. ಕೈಗಳನ್ನು ಬಳಸಲು ಕಲಿಯುತ್ತಿದ್ದಂತೆ ಮಗು ಕೈಗೆ ಸಿಕ್ಕಿದ ಸುಣ್ಣ, ಇದ್ದಿಲು, ಪೆನ್ಸಿಲ್‌ನಿಂದ ಚಿತ್ರ ರಚನೆಯಲ್ಲಿ ತೊಡಗುತ್ತದೆ. ಭಾಷೆಯನ್ನು ಕಲಿಯುವ ಜೊತೆ ಜೊತೆಗೇ ಚಿತ್ರ ಬಿಡಿಸಲೂ ಮಗು ಕಲಿಯುತ್ತದೆ. ಭಾಷೆಗಿಂತ ಚಿತ್ರಗಳ ಮೂಲಕ ಅದು ವೇಗವಾಗಿ, ನಿರ್ದಿಷ್ಟವಾಗಿ ಯಾವುದೇ ವಿಚಾರವನ್ನು ಕಲಿಯಲು ಸಾಧ್ಯವಿದೆ. ಹಾಗೆ ತನ್ನ ಅನಿಸಿಕೆಗಳನ್ನು, ಅನುಭವಗಳನ್ನು ಪರಿಣಾಮಕಾರಿಯಾಗಿ ಹೇಳಲೂ ಸಾಧ್ಯವಿದೆ. ಆದ್ದರಿಂದ ಮಗುವಿಗೆ ಯಾವುದೇ ಕೌಶಲವನ್ನು ಕಲಿಸುವಾಗ ಮಾಹಿತಿಯನ್ನು ನೀಡುವಾಗ, ಸಿದ್ಧಾಂತಗಳನ್ನು ಮನದಟ್ಟು ಮಾಡುವಾಗ, ಪೋಷಕರು ಮತ್ತು ಶಿಕ್ಷಕರು ಚಿತ್ರಕಲೆಯನ್ನು ಹೆಚ್ಚು ಹೆಚ್ಚಾಗಿ ಬಳಸುವ ಅಗತ್ಯವಿದೆ. ಮಕ್ಕಳಿಗೆ 'ಡ್ರಾಯಿಂಗ್' ಕಲಿಸುವುದು ಕೇವಲ ನೆಪಮಾತ್ರಕ್ಕೆ ಆಗಬಾರದು. ಪ್ರತಿಯೊಬ್ಬ ಶಿಕ್ಷಕ ಒಳ್ಳೆಯ ಚಿತ್ರಕಾರನಾಗಬೇಕು. ಚಿತ್ರ ಮಾಧ್ಯಮವನ್ನು ಬಳಸಿ ಪಾಠ ಹೇಳುವವನಾಗಬೇಕು. ಮಕ್ಕಳಿಗೆ ಚಿತ್ರಕಲೆಯನ್ನು ಕಲಿಯುವ ಅವಕಾಶಗಳು ವಿಪುಲವಾಗಿ ಸಿಗುವಂತಾಗಬೇಕು. ಚಿತ್ರಬಿಡಿಸುವ ಸ್ಪರ್ಧೆಗಳು ಕೇವಲ ವಾರ್ಷಿಕ ಚಟುವಟಿಕೆಯಾಗದೇ, ಕನಿಷ್ಠ ತಿಂಗಳಿಗೊಮ್ಮೆಯಾದರೂ ನಡೆಯುವಂತಾಗಬೇಕು. ಸಮಸ್ಯಾತ್ಮಕ ನಡವಳಿಕೆಯುಳ್ಳ ಮಗುವಿನ ಮನಸ್ಸಿನಲ್ಲಿ ಏನಿದೆ ಎಂಬುದನ್ನು ಚಿತ್ರ ಬರೆಸುವುದರ ಮೂಲಕ ಅಥವಾ ಚಿತ್ರಗಳನ್ನು ತೋರಿಸಿ ಕಥೆ ಹೇಳಿಸುವ ಮೂಲಕ ಶಿಕ್ಷಕರು, ಪೋಷಕರು ವೈದ್ಯರು ಅರಿಯಬಹುದಾಗಿದೆ. ತನ್ಮೂಲಕ ಕ್ಷಿಪ್ರವಾಗಿ ಪರಿಹಾರಗಳನ್ನೂ ಕೈಗೊಳ್ಳಬಹುದಾಗಿದೆ.

ಒಳ್ಳೆಯ ತೈಲವರ್ಣದ, ಜಲವರ್ಣದ ಹಾಗೂ ಇನ್ನಿತರ ಬಗೆಯ ಚಿತ್ರಗಳ ಆಲ್ಬಂ ತಯಾರಿಸಿಕೊಂಡು, ಬಿಡುವಾಗಿ ಕುಳಿತು, ನೋಡಿ ಆನಂದಿಸಿದರೆ, ಮೈ-ಮನಗಳು ವಿರಮಿಸುತ್ತವೆ. ಯಾವುದೇ ಒತ್ತಡ, ಬೇಸರ, ಆತಂಕಗಳು ದೂರವಾಗುತ್ತವೆ. ಹಾಗೆಯೇ ದೈನಂದಿನ ಜಂಜಾಟಗಳು, ಜೀವನದ ಸಮಸ್ಯೆಗಳಿಂದ ಸ್ವಲ್ಪಕಾಲ ಪಾರಾಗಲು, ಮನಸ್ಸಿನ ಸೃಜನಶೀಲತೆಗೆ ಕೆಲಸಕೊಡಲು ಚಿತ್ರ ರಚನೆಯಲ್ಲಿ ತೊಡಗುವುದು ಒಂದು ಆರೋಗ್ಯಕರ ಹವ್ಯಾಸ. ಇದನ್ನು ಬಾಲ್ಯದಿಂದಲೇ ನಾವು ರೂಢಿಸಿಕೊಂಡರೆ, ನಮ್ಮ ಆರೋಗ್ಯವನ್ನು ಅದು ಉಳಿಸಿ, ವರ್ಧಿಸಬಲ್ಲದು. ಹೆಸರಾಂತ ಚಿತ್ರಕಲಾವಿದರು, ಮಕ್ಕಳಿಗೆ, ಹರೆಯದವರಿಗೆ ಸ್ಫೂರ್ತಿದಾತರಾಗಬಲ್ಲರು. ಚಿತ್ರಕಲೆಗೆ, ಚಿತ್ರಕಲಾವಿದರಿಗೆ ಸರಿಯಾದ ಉನ್ನತ ಸ್ಥಾನಮಾನ ನೀಡುವುದು, ಗೌರವಿಸುವುದು ಆರೋಗ್ಯವಂತ ಸಮಾಜದ ಲಕ್ಷಣ. ಚಿತ್ರಕಲೆಯನ್ನು ಮನೋವಿಕಾಸಕ್ಕೆ, ಮಾನಸಿಕ ಆರೋಗ್ಯವರ್ಧನೆಗೆ ಬಳಸುವುದು ನಮ್ಮ ಕೈಯಲ್ಲೇ ಇದೆ.

ಇಂದು ಕಲೆ ಹಾಗೂ ಜನಸಾಮಾನ್ಯರ ನಡುವೆ ಭಾರೀ ಅಂತರವಿದೆ. ಇಂದಿನ ಸಮಕಾಲೀನ ಕಲೆಯು ಜನಸಾಮಾನ್ಯರಿಗೆ ಅರ್ಥವಾಗದಿರುವುದೇ ಇದಕ್ಕೆ ಕಾರಣ ಎಂದು ಹಲವರ ಅಭಿಪ್ರಾಯ. ದೃಶ್ಯ ಕಲೆಗಳನ್ನು ಆಸ್ವಾದಿಸುವ ದೃಷ್ಟಿಯಿಂದ ನಮ್ಮ ಸಾಮಾನ್ಯ ಶಿಕ್ಷಣದಲ್ಲೂ ಗಂಭೀರ ಪ್ರಯತ್ನಗಳು ನಡೆಯುತ್ತಿಲ್ಲ. ಅಂತೆಯೇ ಈ ಕೊರತೆಗಳನ್ನು ಸ್ವಲ್ಪವಾದರೂ ತುಂಬುವುದು ಈ ಜನಪ್ರಿಯ ಕಲಾಮಾಲಿಕೆಯ ಆಶಯ. ಹೀಗೆ ಸಾಮಾನ್ಯರಿಗೆ ದೃಶ್ಯಕಲೆಗಳ ಪ್ರಾಥಮಿಕ ಜ್ಞಾನ ಒದಗಿಸುವ ದೃಷ್ಟಿಯಿಂದಲೇ ಇದನ್ನು ರೂಪಿಸಲಾಗಿದೆ. ಇದರಲ್ಲಿ ದೃಶ್ಯಕಲೆಯ ತಾತ್ವಿಕ ಅಂಶಗಳು, ಮಾಧ್ಯಮಗಳು, ತಂತ್ರಗಳು, ಇತಿಹಾಸ, ಆಧುನಿಕ ಕಲಾ ಪಂಥಗಳು ಇತ್ಯಾದಿ ಹಲವು ವಿಷಯಗಳನ್ನು ಕುರಿತಂತಹ ಹೊತ್ತಿಗೆಗಳನ್ನು ತರುತ್ತಿದ್ದೇವೆ. ತನ್ಮೂಲಕ ದೃಶ್ಯಕಲೆಯನ್ನು ಆಸ್ವಾದಿಸುವ ದಿಸೆಯಲ್ಲಿ ಹೆಚ್ಚಿನ ಜನರು ತೊಡಗುತ್ತಾರೆಂಬ ಮಹತ್ವಾಕಾಂಕ್ಷೆ ಈ ಮಾಲಿಕೆಯದು. ಹೀಗೆ ಜನರನ್ನು 'ಸಹೃದಯ' ರನ್ನಾಗಿಸುವ ದಿಸೆಯಲ್ಲಿ ಇದೊಂದು ಪುಟ್ಟ ಪ್ರಯತ್ನ.

ಚಿ. ಸು. ಕೃಷ್ಣ ಸೆಟ್ಟಿ
ಸಂಪಾದಕರು